# ಕಥಾಸಂಕಲನ

( ಇತಿಹಾಸ ಪುರಾಣಗಳ ಪುಟ್ಟ ಕಥೆಗಳ ಸಂಗ್ರಹ )

ಸಂಗ್ರಾಹಕರು

ಶ್ರೀ ರಾಮವಿಟ್ಠಲಾಚಾರ್ಯ

16ನೇ ಅಖಿಲ ಭಾರತ ಮಾಧ್ವತತ್ತ್ವಜ್ಞಾನ ಸಮ್ಮೇಳನದ
ಸವಿನೆನಪಿನ ಪ್ರಕಾಶನ

ಪ್ರಕಾಶಕರು

ಅಖಿಲ ಭಾರತ ಮಾಧ್ವಮಹಾಮಂಡಲ
ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ರಿಗುಪ್ಪ ಮುಖ್ಯರಸ್ತೆ
ಬೆಂಗಳೂರು - 560 028

# ಸಂಪಾದಕರ ಮಾತು

ಇತಿಹಾಸ ಪುರಾಣಗಳಲ್ಲಿ ಪ್ರಾಸಂಗಿಕವಾಗಿ ಬರುವ ಸಣ್ಣ ಕಥೆಗಳ ಸಂಗ್ರಹ ಈ ಕಿರು ಹೊತ್ತಿಗೆ. ಬರೆದವರು ಭಗವಾನ್ ವ್ಯಾಸರು. ಹೇಳಿದವರು ಪೂಜ್ಯ ಶ್ರೀ ವಿಶ್ವೇಶತೀರ್ಥರು. ಸಂಗ್ರಹಿಸಿದವರು ಪಂಡಿತ ಶ್ರೀರಾಮ ವಿಠಲ. ಶ್ರೀಗಳವರು ಉಲ್ಲೇಖಿಸದ ಕಥೆಗಳೂ ಕೆಲವು ಇವೆ. ಎಲ್ಲವೂ ತತ್ವವಾದ ಮಾಸಿಕದಲ್ಲಿ ಈಗಾಗಲೇ ಪ್ರಕಟಗೊಂಡಿವೆ. ಒಂದೊಂದು ಕಥೆಯೂ ಜೀವನದಲ್ಲಿ ಅವಶ್ಯ ಅನುಸರಿಸಬೇಕಾದ ಆದರ್ಶಗಳನ್ನು ಪ್ರತಿಬಿಂಬಿಸುತ್ತವೆ. ಮಕ್ಕಳು ಓದಿ ಅನುಸರಿಸಬೇಕೆಂದು ಉದ್ದೇಶ. ಆದರೆ ಕೆಲವು ಮಕ್ಕಳ ಸಾಮರ್ಥ್ಯಕ್ಕೆ ಮೀರಿವೆ. ಹಿರಿಯರು ಓದಿ ಮಕ್ಕಳಿಗೆ ಹೇಳಬೇಕು. ಅಷ್ಟೇ ಅಲ್ಲ, ತಾವೂ ಅನುಸರಿಸಬೇಕು. ಆಗ ಈ ಶ್ರಮ ಸಾರ್ಥಕ.

ಕಥೆಗಳಲ್ಲಿ ಆದರ್ಶವನ್ನು ತೋರಿಸಿಕೊಟ್ಟ ಶ್ರೀ ಪೇಜಾವರ ಮಠಾಧೀಶರಿಗೆ ಪ್ರಣಾಮ ಪೂರ್ವಕ ಕೃತಜ್ಞತೆಗಳು. ಸಂಗ್ರಹಿಸಿದ ಶ್ರೀರಾಮವಿಠಲಾಚಾರ್ಯರಿಗೂ ಚಿರಋಣಿ. ಚಿತ್ರಗಳನ್ನು ಬರೆದುಕೊಟ್ಟ ಶ್ರೀ ಎಸ್.ಆರ್. ಪಾಟೀಲ್‌ರವರಿಗೆ ಮತ್ತು ಸೂಕ್ತ ಸಲಹೆ ಸೂಚನೆಗಳನ್ನಲ್ಲದೆ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಬೃಂದಾವನ ಮುದ್ರಣಾಲಯದ ನಿರ್ದೇಶಕರಾದ ಶ್ರೀ M.H. ಕೌಜಲಗಿಯವರಿಗೂ ಆಭಾರಿಗಳು.

*ದಿನಾಂಕ :* *ಸಂಪಾದಕರು*

18-2-1994 ಎ. ಹರಿದಾಸಭಟ್ಟ

ॐ

# ಮುನ್ನುಡಿ

ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ ।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ॥

ವೇದವ್ಯಾಸ ಗುಣಾವಾಸ ವಿದ್ಯಾಧೀಶ ಸತಾಂ ವಶ ।
ಮಾಂ ನಿರಾಶಂ ಗತಕ್ಲೇಶಂ ಕುರ್ವನಾಶಂ ಹರೇಽನಿಶಮ್ ॥

ಶ್ರೀಮದಾನಂದತೀರ್ಥಾರ್ಯ ಪಾದಪಂಕಜರೇಣವಃ ।
ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ॥

ರಕ್ತಾಂಬರೋ ರಕ್ತತನುಃ ರಕ್ತಮಾಲ್ಯಾನುಲೇಪನಃ ।
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೇ ।
ಬಿಭ್ರದ್ವೇದ್ಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥

ಪ್ರಪಂಚದಲ್ಲಿ ಭಗವಂತನ ತತ್ತ್ವಜ್ಞಾನ ಲೋಪವಾದಾಗ ಸಜ್ಜನರಿಗೆ ಅಧ್ಯಾತ್ಮಮಾರ್ಗ ಕಾಣದಾಯಿತು. ಲೋಕಾನುಗ್ರಹದ ಆಕಾಂಕ್ಷೆಯಿಂದ ದೇವತೆಗಳು ಭಗವಂತನಲ್ಲಿ ಮೊರೆಯಿಟ್ಟರು. ದೇವತೆಗಳ ಪ್ರಾರ್ಥನೆಯಿಂದ ಶ್ರೀನಾರಾಯಣನೇ ವೇದವ್ಯಾಸರಾಗಿ ಅವತರಿಸಿದನು. ವೇದಗಳನ್ನು ಶಾಖೋಪ ಶಾಖೆಗಳಾಗಿ ವಿಭಾಗಿಸಿದರು. ವೇದಾರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನೂ ರಚಿಸಿದರು. ಇದೆಲ್ಲವೂ ವೇದ ಮತ್ತು ಬ್ರಹ್ಮಸೂತ್ರಗಳ ಅಧ್ಯಯನದಲ್ಲಿ ಅರ್ಹರಾದವರಿಗೆ ಸಾಧನವಾಯಿತು. ಆದರೆ ವೇದ, ಸೂತ್ರಗಳ ಅಧ್ಯಯನ ಅರ್ಹತೆ ಪಡೆಯದವರಿಗೆ? ಅವರಿಗಾಗಿಯೇ ಕರುಣಾಳುಗಳಾದ ವೇದವ್ಯಾಸರು ಮಹಾಭಾರತ ಮತ್ತು

ರಾಮಾಯಣ ಹಾಗೂ ಹದಿನೆಂಟು ಪುರಾಣಗಳನ್ನು ರಚಿಸಿದರು. ಇತಿಹಾಸಗ್ರಂಥವೆಂದು ಪ್ರಸಿದ್ಧವಾದ ಮಹಾಭಾರತದಲ್ಲಿ ನಿರೂಪಿಸದ ವಿಷಯವೇ ಇಲ್ಲ. ಅಲ್ಲಿ ಇರುವುದೇ ಬೇರೆಡೆ. ಅಲ್ಲಿ ಇಲ್ಲದ್ದು ಬೇರೆಲ್ಲೂ ಇಲ್ಲ. ಇದು ಮನು ಕುಲದ ಜೀವನಕ್ಕೆ ಮಾರ್ಗದರ್ಶನ ನೀಡುವ ನೀತಿಗ್ರಂಥ. ಅಧ್ಯಾತ್ಮಸಾಧಕರಿಗೆ ಭಗವಂತನ ವ್ಯಕ್ತಿತ್ವವನ್ನು ಪರಿಚಯಿಸುವ ತತ್ವಗ್ರಂಥ.

ಶ್ರೀಕೃಷ್ಣ, ದ್ರೌಪದೀ, ಪಾಂಡವರು ಮತ್ತು ಕೌರವರ ಕೌಟುಂಬಿಕ ಕಥಾನಿರೂಪಣ ಮಹಾಭಾರತದ ಒಂದು ಮುಖವಾದರೆ ಸದ್ಗುಣ-ದುರ್ಗುಣಗಳ ಹೋರಾಟ, ಅಧರ್ಮದ ವಿರುದ್ಧ ಧರ್ಮದ ಜಯ ಎಂಬ ಅಂತರಾರ್ಥ ಇನ್ನೊಂದು ಮುಖ. ಪ್ರತಿಯೊಂದು ವರ್ಣ, ಪದ, ವಾಕ್ಯ ಎಲ್ಲವೂ ಭಗವಂತನ ಮಹಿಮೆಯನ್ನು ಕೊಂಡಾಡುವ ದಿವ್ಯನಾಮ ಎಂಬುದು ಭಾರತದ ಬಹಳ ಮುಖ್ಯವಾದ ಮುಖ.

ಶ್ರೀಕೃಷ್ಣನ ಸರ್ವೋತ್ತಮತ್ವವನ್ನು, ವಾಯುದೇವರ ಜೀವೋತ್ತಮತ್ವವನ್ನು ಗುರಿಯಾಗಿಟ್ಟುಕೊಂಡು ಪ್ರವಹಿಸುವ ಪಾಂಡವಕಥಾಮುಖ್ಯವಾಹಿನಿಯೊಂದಿಗೆ ಈ ಉಪಾಖ್ಯಾನಗಳು, ಉದ್ಬೋಧಕ ನೀತಿಕಥೆಗಳೆಂಬ ಉಪನದಿಗಳ ಸಂಗಮಗಳೂ ಮಹಾಭಾರತದಲ್ಲಿ ಹಲವಾರು ಇವೆ. ಸಾವಿರಾರು ವರ್ಷಗಳ ಹಿಂದೆ ರಚಿತವಾದದ್ದಾದರೂ ಮಹಾಭಾರತ ಇಂದಿಗೂ ಎಂದೆಂದಿಗೂ ಪ್ರಸ್ತುತವಾಗಿ ರುವುದೇ ಅದರ ಮೌಲಿಕತೆಗೆ ಸೂಚನೆಯಾಗಿದೆ. ಮಹಾಭಾರತದಲ್ಲಿ ಬರುವ ನೀತಿಕಥಾಕುಸುಮಗಳನ್ನು ಸಂಗ್ರಹಿಸಿ ಶ್ರೀಕೃಷ್ಣನಿಗೆ ಸಮರ್ಪಿಸುವುದೇ ಈ ಗ್ರಂಥದ ಉದ್ದೇಶ.

ಸಂಗ್ರಾಹಕರು

*ಶ್ರೀ ರಾಮವಿಟ್ಠಲಾಚಾರ್ಯರು*

# ಗಣಪತಿಯ ಸವಾಲು

ವೇದವ್ಯಾಸರು ಮಹಾಭಾರತ ಗ್ರಂಥವನ್ನು ರಚಿಸಿ, ಇದನ್ನು ಮುಂದೆ ಶಾಶ್ವತವಾಗಿ ಉಳಿಸಲು ಯಾರಿಂದ ಬರೆಸುವುದು? ಹೇಗೆ ಪ್ರಚಾರ ಮಾಡುವುದು ? ಎಂದು ವಿಚಾರ ಮಾಡಿ, ಅತ್ಯಂತ ಚುರುಕು ಬುದ್ಧಿಯ, ಚಟುವಟಿಕೆಯ ಮೂರ್ತಿಯಾದ ಗಣಪತಿಯಿಂದ ಬರೆಸಬೇಕೆಂದು ನಿಶ್ಚಯಿಸಿದರು. ಗಣಪತಿಯಿಂದಲೇ ಬರೆಸುವ ವ್ಯಾಸರ ನಿರ್ಧಾರಕ್ಕೆ ಕಾರಣವೂ ಇದೆ. ಗಣಪತಿ- ಆಕಾಶತತ್ವಾಭಿಮಾನಿ. ಶಬ್ದಕ್ಕೆ



ಆಕಾಶವೇ ಆಶ್ರಯ. ಶಬ್ದಗಳಿಗೆ ಆಶ್ರಯವಾದ ಆಕಾಶಕ್ಕೆ ಅಭಿಮಾನಿಯಾದ ಗಣಪತಿಯಿಂದಲೇ ಮಹಾಭಾರತ ಬರೆಸಿದರೆ ಅದು ಚಿರಶಾಶ್ವತವಾಗಿ ರೆಕಾರ್ಡ್‌ನಂತೆ ಉಳಿಯುತ್ತದೆ - ಎನ್ನುವ ಭಾವನೆ ವೇದವ್ಯಾಸರದು.

ಮಹಾಭಾರತವನ್ನು ಬರೆಯಲು ವ್ಯಾಸರು ಹೇಳಿದಾಗ ಸಂತೋಷದಿಂದಲೇ ಒಪ್ಪಿಕೊಂಡ ಗಣಪತಿ, ಒಂದು ಕರಾರು ಹಾಕಿದನು - ವ್ಯಾಸರೇ ! ನಾನು ಬರೆಯಲು ಸಿದ್ಧ. ಆದರೆ ನನ್ನನ್ನು ಒಂದು ಕ್ಷಣವೂ ಕಾಯಿಸಬಾರದು. ಕಾಯುವುದು ನನ್ನಿಂದಾಗದು ಎಂದು.

ಹಿಂದೆ ತಪಸ್ಸಿನಿಂದ ಈಶ್ವರನನ್ನು ಮೆಚ್ಚಿಸಿದ ರಾವಣ, ಅವನಿಂದ ಅವನ ಆತ್ಮಲಿಂಗವನ್ನೇ ಕೇಳಿದನು. ರಾವಣನ ತಪಸ್ಸಿಗೆ ಮೆಚ್ಚಿದ ಈಶ್ವರ ಮೈಮರೆತು ರಾವಣನ ಈ ಬಯಕೆಯನ್ನು ಈಡೇರಿಸಿದನು. ಪತಿಯ ಆತ್ಮಲಿಂಗ ದುಷ್ಟನ ಅಧೀನವಾಗುವುದು ಪಾರ್ವತಿಗೆ ಇಷ್ಟವಿಲ್ಲ. ಗಣಪತಿಯನ್ನು ಪ್ರಚೋದಿಸಿದಳು. ತಾಯಿಯ ಅಣತಿಯಂತೆ ಗಣಪತಿ ವೇಷ ಬದಲಿಸಿ ಗೋಕರ್ಣಕ್ಕೆ ಬಂದನು. ಸಂಧ್ಯಾ ಕಾಲವಾದ್ದರಿಂದ ಆಹ್ನಿಕ ಮಾಡಲು ಸಮುದ್ರಕ್ಕೆ ಹೊರಟಿದ್ದ ರಾವಣನಿಗೆ ತನ್ನ ಆಹ್ನಿಕ ಮುಗಿಯುವವರೆಗೆ ಆತ್ಮಲಿಂಗವನ್ನು ರಕ್ಷಿಸಲು ಯಾರಾದರೂ ಬೇಕಾಗಿತ್ತು. ಅಲ್ಲಿಯೇ ದನಕಾಯುತ್ತಿದ್ದ ಗಣಪತಿಗೆ ಕೊಟ್ಟು '' ನಾನು ಬರುವವರೆಗೆ ಇದನ್ನು ಹಿಡಿದುಕೊಂಡಿರು'' - ಎಂದು ಕೇಳಿಕೊಂಡ. ಗಣಪತಿ - ನಾನು ಕಾಯಲಾರೆ. ಮೂರು ಎಣಿಸುವಷ್ಟರಲ್ಲಿ ಬಂದರೆ ಸರಿ. ಇಲ್ಲದಿದ್ದರೆ ನೀನು ಅಲ್ಲಿಯೇ, ಇದು ಇಲ್ಲಿಯೇ ಎಂದು ಅವಸರಿಸಿದನು. ರಾವಣ ಸ್ನಾನ ಮುಗಿಸಿ ಆಹ್ನಿಕ ಮಾಡುವಷ್ಟರಲ್ಲಿ ಮೂರು ಎಣಿಸಿ ನೆಲದಲ್ಲಿ ಸ್ಥಾಪನೆಗೈದ. ಸಮುದ್ರದಿಂದ ಬಂದ ರಾವಣ ಅದನ್ನು ಕೀಳಲು ಅಸಮರ್ಥನಾದ.

ಹೀಗೆ, ಕಾಯುವುದೆಂದರೆ ಗಣಪತಿಯ ಜಾಯಮಾನಕ್ಕೆ ಹಿಡಿಸದು. ಈ ದಿವಸಗಳಲ್ಲಿ ಗಣಪತಿ ಏನಾದರೂ ಭೂಮಿಗೆ ಬಂದಿದ್ದರೆ, ಸಿಡಿಮಿಡಿಗೊಂಡು ಎಲ್ಲರಿಗೂ ಶಾಪವಿತ್ತು ಕೈಲಾಸಕ್ಕೆ ಓಡುತ್ತಿದ್ದನೇನೋ. ಪ್ರತಿಯೊಂದು ಸಣ್ಣ ಕೆಲಸಕ್ಕೂ ದಿನವಿಡೀ ಕಾಯದೇ ಗತ್ಯಂತರವಿಲ್ಲ ಎನ್ನುವುದು ಎಲ್ಲ ನಾಗರಿಕರ ಅನುಭವ.

ಗಣಪತಿಯ ಷರತ್ತಿಗೆ ವ್ಯಾಸರೂ ಷರತ್ತು ಹಾಕಿದರು. ಪ್ರತಿಯೊಂದು ಶ್ಲೋಕವನ್ನೂ ಅರ್ಥ ಮಾಡಿಕೊಂಡೇ ಬರೆಯಬೇಕು - ಎಂದು. ಬೇಕೆಂತಲೇ

ಕೆಲವಡೆ ಗೂಢಾರ್ಥದ ಕೆಲವು ಶ್ಲೋಕಗಳನ್ನು ಹೇಳಿ ಗಣಪತಿಗೆ ತಲೆಗೆಲಸ ಹೆಚ್ಚಿಸುತ್ತಿದ್ದರು.

ಇಲ್ಲಿ ಗಣಪತಿ, ವ್ಯಾಸರು - ಇಬ್ಬರಿಂದಲೂ ಒಂದೊಂದು ಸಂದೇಶವನ್ನು ನಾವು ಗಮನಿಸಬೇಕು.

ಒಂದು ಕ್ಷಣವೂ ನಾವು ನಿಷ್ಕ್ರಿಯರಾಗಿರ ಬಾರದು. ಸ್ವಲ್ಪವೂ ಕೆಲಸವಿಲ್ಲದೇ ಸುಮ್ಮನೇ ಕಾಲ ಕಳೆಯುತ್ತಿದ್ದರೆ ದುಷ್ಟಶಕ್ತಿಗಳು ನಮ್ಮಲ್ಲಿ ಪ್ರವೇಶಿಸಿ ಅಂತಃಕರಣವನ್ನು ಕಲಕಿ ಮಲಿನಗೊಳಿಸುತ್ತವೆ - ಇದು ಗಣಪತಿಯ ಮೂಲಕ ತಿಳಿದು ಬರುವ ಸಂದೇಶ.

ಕರ್ತವ್ಯ ಮಾಡುವಾಗ ಅದರ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಪಡೆದಿರಬೇಕು. ಎಲ್ಲ ಆಚರಣೆಯಲ್ಲಿಯೂ ಅದರ ಹಿನ್ನೆಲೆಯ ಪರಿಜ್ಞಾನವಿರ ಬೇಕು. ಇನ್ನೊಬ್ಬರು ಮಾಡಿದರು, ಆದ್ದರಿಂದ ನಾನೂ ಮಾಡುತ್ತೇನೆ ಎನ್ನುವ ಮೌಢ್ಯ ಎಂದಿಗೂ ಸಲ್ಲದು. ಅವರು ಏಕೆ ಮಾಡಿದರು ? ನಾವು ಏಕೆ, ಹೀಗೆ ಮಾಡಬೇಕು? ಆ ಕ್ರಿಯೆಯ ಅಂತರಾರ್ಥವೇನು? ಎನ್ನುವ ವಿಮರ್ಶೆಯಿರಲಿ - ಎನ್ನುತ್ತಾರೆ ವೇದ ವ್ಯಾಸರು.

★ ★ ★

# ವೀರಮಾತೆ

ದೇಶದ ಮೇಲೆ ಶತ್ರುಗಳ ಆಕ್ರಮಣ ನಡೆದಿದೆ. ಆಕೆ ಮಗನನ್ನು ಯುದ್ಧಕ್ಕಾಗಿ ರಣಾಂಗಣಕ್ಕೆ ಕಳುಹಿಸಿದ್ದಾಳೆ. ಶತ್ರುಗಳ ಪರಾಕ್ರಮದೆದುರು ಈ ಮಗ ಹೆದರಿ ಓಡಿದ್ದಾನೆ. ಅರಮನೆಗೆ ಹಿಂತಿರುಗಿದ್ದಾನೆ. ಅರಮನೆಯ ಬಾಗಿಲು ಮುಚ್ಚಿದೆ. ಬಾಗಿಲು ಕುಟ್ಟಿದ್ದಾನೆ. ಅರಚುತ್ತಿದ್ದಾನೆ. ಅರಮನೆಯ ಉಕ್ಕಿನ ಬಾಗಿಲು ಕದಲಲಿಲ್ಲ. " ಈ ಉಕ್ಕಿನ ದ್ವಾರದಂತೆಯೇ ನಿನ್ನ ಹೃದಯವೂ ಕಠಿಣ! ಮಗನು ಗಾಯಗೊಂಡು ದುಃಖದಿಂದ ಬಂದರೆ ಬಾಗಿಲು ತೆಗೆಯದೆ ಸುಖಿಯಾಗಿರುವ ನೀನು ತಾಯಿಯೇ ? ಅಲ್ಲ ರಾಕ್ಷಸಿ. ಮಗನ ಮೇಲೆ ವಾತ್ಸಲ್ಯವೇ ಇಲ್ಲ !" - ಮಗನು ಗೋಗರೆದಿದ್ದಾನೆ. ಜರೆದಿದ್ದಾನೆ. " ನಾನು ಬಂಜೆ. ಮಗನಿಲ್ಲ. ಮಗು ಬರುವುದೆಂದರೇನು. ಬಾಗಿಲು ತೆಗೆಯುವುದೆಂದರೇನು ? ನನಗೇನೂ ಸಂಬಂಧವಿಲ್ಲ". ತಾಯಿಯ ನಿಷ್ಠುರ ಉತ್ತರ.

ಈ ತಾಯಿಯ ನಿಷ್ಠುರ ಉತ್ತರದಿಂದ ಕೋಪಗೊಂಡ ಮಗ ರಣಾಂಗಣಕ್ಕೆ ತಿರುಗಿದ್ದಾನೆ. ಅಲ್ಲೆ ಸಾಯುವುದು ಉತ್ತಮ ಎಂದು. ಕುಪಿತ ವೀರನ ಅಪ್ರತಿಮ ಹೋರಾಟದ ಫಲವಾಗಿ ಶತ್ರುಗಳು ಮಣ್ಣುಮುಕ್ಕಿದ್ದಾರೆ. ವಿಜಯೋತ್ಸಾಹದಿಂದ ಆಮೇಲೆ ಅರಮನೆಗೆ ಬಂದಿದ್ದಾನೆ. ಉಕ್ಕಿನ ಬಾಗಿಲು ತೆರೆದಿದೆ. ಸಕಲ ವೈಭವಗಳೊಂದಿಗೆ ಮಗನನ್ನು ಸ್ವಾಗತಿಸಲು ತಾಯಿ ಬಂದು ನಿಂತಿದ್ದಾಳೆ.

" ಯುದ್ಧದಲ್ಲಿ ಶತ್ರುಗಳಿಗೆ ಹೆದರಿ ಪಲಾಯನ ಮಾಡಿದ ಹೇಡಿ ನನ್ನ ಮಗನಲ್ಲ, ಅಂತಹ ಪುಕ್ಕಲು ಪುರುಷನನ್ನು ನನ್ನ ಮಗನೆಂದು ಹೇಳಿಕೊಳ್ಳುವ ಅವಮಾನಕ್ಕಿಂತಲೂ ಬಂಜೆತನವೇ ಲೇಸು. ರಣಾಂಗಣದಲ್ಲಿ ಕೆಚ್ಚೆದೆಯಿಂದ ಹೋರಾಡಿ ವಿಜಯಲಕ್ಷ್ಮಿಯ ಕೈಹಿಡಿದು ಬಂದ ಈ ವೀರಾಗ್ರಣಿ ನನ್ನ ಪುತ್ರ. ನಾನು ಈಗ ವೀರಮಾತೆ. ಬಾ ಕಂದ, ಕೋಟೆಯ ಬಾಗಿಲು ತೆರೆದಿದೆ. ಇನ್ನು ಒಳಗೆ ಬಾ ಮಗು. ನನ್ನ ಹೃದಯದ ಉಕ್ಕಿನ ಬಾಗಿಲನ್ನು ಕೂಡ ತೆರೆದಿದ್ದೇನೆ.

ತಾಯಿಯ ವಾತ್ಸಲ್ಯ, ಅಂತಃಕರಣಗಳು ಮಗನಿಗೆ ಅರ್ಥವಾಗಿದೆ. ಈ ಹಿಂದೆ ಆಡಿದ ತನ್ನ ಅವಿವೇಕದ ಮಾತುಗಳಿಗೆ ಪಶ್ಚಾತ್ತಾಪ ಪಟ್ಟಿದ್ದಾನೆ. ನಾನಿಂಥ ವೀರ ಮಾತೆಯ ಪುತ್ರನೆಂದು ಹೆಮ್ಮೆ ಪಟ್ಟಿದ್ದಾನೆ. ಕರ್ತವ್ಯದ ಜಾಗೃತಿ ಮೂಡಿದೆ.

" ಶ್ರೀ ಕೃಷ್ಣ ! ನನ್ನ ಪಾಂಡವರಿಗೆ ಈ ಕಥೆಯನ್ನು ಹೇಳು. ಇದೇ ನನ್ನ ಸಂದೇಶ ".

ಪಾಂಡವರ ಪ್ರತಿನಿಧಿಯಾಗಿ ಹಸ್ತಿನಾವತಿಗೆ ಹೊರಟ ಶ್ರೀಕೃಷ್ಣನ ಮೂಲಕ ಪಾಂಡವರಿಗೆ ಕುಂತಿ ಕಳುಹಿಸಿದ ಸಂದೇಶ ಇದು.

ಬೆಂಕಿ ಹೊಗೆ ಕಾರುತ್ತಾ ಪ್ರಕಾಶ ನೀಡದೆ ಅನಂತ ಕಾಲ ಉಳಿದರೇನು. ಇತರರಿಗೆ ಉಪದ್ರವವಷ್ಟೇ. ಉಜ್ವಲ ಪ್ರಕಾಶನೀಡಿ ಕ್ಷಣಕಾಲ ಇದ್ದರೂ ಅದು ಶ್ರೇಷ್ಠ.

ನಮ್ಮ ಮಕ್ಕಳು ಧಾರ್ಮಿಕರಾಗಬೇಕು, ಜ್ಞಾನಿಗಳಾಗಬೇಕು, ಅಧರ್ಮ, ಅಜ್ಞಾನಗಳ ವಿರುದ್ಧ ಸೆಣಸಾಡಿ ವೀರಪುತ್ರರೆನಿಸಬೇಕು. ಅಂತಹವರ ತಾಯಿಯಾಗಿ ವೀರಮಾತೆಯಾಗಿರಬೇಕು, ನಮ್ಮ ತಾಯಂದಿರು. ಯುದ್ಧದಿಂದ ಹೆದರಿ ಹಿಂತಿರುಗಿದ ಮಗನಿಗೆ ಬಾಗಿಲು ಹಾಕಿ, "ನಾನು ಬಂಜೆ " ಎಂದುಕೊಂಡ ಆ ವೀರ ಧೀರಮಾತೆಯಲ್ಲಿ? ಏಕಾದಶೀ ಉಪವಾಸ ಮುಂತಾದ ಧರ್ಮದಲ್ಲಿ ತೊಡಗಿದ ಮಗನನ್ನು ಅದರಿಂದ ವಿಮುಖಗೊಳಿಸಿ ಅನುತ್ಸಾಹದ ತಣ್ಣೀರೆರಚುವ ಈಗಿನ ಮಾತೆಯರೆಲ್ಲಿ?

★ ★ ★

# ಸರ್ಪಯಾಗ

" ಬೇಟೆಗಾಗಿ ಹೊರಟ ನಿನ್ನ ತಂದೆ - ಪರೀಕ್ಷಿತನು ದಣಿದು ಬಾಯಾರಿ ನೀರಿಗಾಗಿ ಮುನಿಯ ಆಶ್ರಮಕ್ಕೆ ಬಂದ. ತಪೋನಿರತನಾಗಿದ್ದ ಮುನಿಯ ಮೌನವನ್ನು ಸಹಿಸುವ ತಾಳ್ಮೆಯಿಲ್ಲದ ರಾಜ ಸರ್ಪಶವವೊಂದನ್ನು ಮುನಿಯ ಕೊರಳಿಗೆ ಹಾಕಿ ಕೋಪದಿಂದ ಹಿಂತೆರಳಿದನು. ಇದನ್ನರಿತ ಋಷಿಕುಮಾರ-ಶೃಂಗಿಯು "ಇಂದಿನಿಂದ ಏಳನೇ ದಿವಸದಲ್ಲಿ ಸರ್ಪದಿಂದಲೇ ರಾಜ ಮೃತನಾಗಲಿ" ಎಂದು ಶಾಪವಿತ್ತ. ಅದರಂತೆ ತಕ್ಷಕಸರ್ಪದಿಂದ ನಿನ್ನ ತಂದೆ ಪರೀಕ್ಷಿತ್ ಮಹಾರಾಜನು ಮೃತನಾದನು." ಎಂದು ಹಸ್ತಿನಾವತಿಯ ಪ್ರಜೆಗಳು ಜನಮೇಜಯ ರಾಜನಿಗೆ ಹೇಳಿದರು.

ಪ್ರಜೆಗಳಿಂದ ತನ್ನ ತಂದೆಯ ಮರಣದ ರೀತಿಯನ್ನು ಕೇಳಿದ ಜನಮೇಜಯ ಸಿಡಿಮಿಡಿಗೊಂಡ. ಸರ್ಪಕುಲವನ್ನೇ ನಿರ್ನಾಮ ಮಾಡುವ ಶಪಥ ಮಾಡಿದ. ಋಷಿಗಳಲ್ಲಿ ಅರಿಕೆ. ಸರ್ಪಯಾಗದ ಸೂಚನೆ. ಅದಕ್ಕಾಗಿ ಋಷಿಗಳಿಂದ ಸರ್ವಸಿದ್ಧತೆ.

ಋಷಿಗಳಿಂದ ಸರ್ಪಯಾಗದ ಆರಂಭ. ಋಷಿಗಳ ಸ್ವಾಹಾಕಾರ, ಸರ್ಪಲೋಕದಲ್ಲಿ ಹಾಹಾಕಾರ. ಕೆಲವು ದೈನ್ಯದ ನೋಟಬೀರಿ ನಿಟ್ಟುಸಿರು ಬಿಡುತ್ತಿದ್ದರೆ, ಮತ್ತೆ ಕೆಲವು ಬೆದರಿಕೆಯಿಂದ ಬುಸುಗುಟ್ಟುತ್ತಿವೆ. ಕೆಲವು ದಾರುಣ ಶಬ್ದಮಾಡುತ್ತಿದ್ದರೆ, ಕೆಲವು ವಿಲಿವಿಲಿ ಒದ್ದಾಡುತ್ತಿವೆ. ಯಾವಸರ್ಪಕ್ಕೂ ಉಳಿಗಾಲವಿಲ್ಲ. ಮಂತ್ರಬಲಕ್ಕೆ ಎಲ್ಲವೂ ಬಲಿ. ಯಜ್ಞೇಶ್ವರನಿಗೆ ಆಹುತಿ!

ಜನಮೇಜಯನ ಸರ್ಪಯಾಗದಿಂದ ತಕ್ಷಕನಿಗೆ ಭೀತಿ. ಇಂದ್ರನಲ್ಲಿ ಆತನ ಮೊರೆ. ಅರಮನೆಯಲ್ಲಿ ಅವನಿಗೆ ಇರುವಂತೆ ಇಂದ್ರನ ಸೂಚನೆ. ಅಭಯ ಪ್ರದಾನವಾದರೂ ತಕ್ಷಕನಿಗೆ ತಳಮಳ ತಪ್ಪಲಿಲ್ಲ.

ಇತ್ತ ವಾಸುಕಿ ಮೊದಲಾದ ಸರ್ಪಗಳು ತಮ್ಮ ತಂಗಿಯಾದ ಜರಾತ್ಕಾರುವಿನ ಮಗನಾದ ಆಸ್ತೀಕನಲ್ಲಿ ಆಗಮಿಸಿವೆ. "ನಿಮ್ಮ ತಾಯಿ ಕದ್ರುವಿನ ಶಾಪದಿಂದ

ನಮಗೆ ಬಂದ ಈ ದುರವಸ್ಥೆಯಿಂದ ಪಾರುಮಾಡಲು ನೀವೇ ಸಮರ್ಥರು'' ಎಂದು ಆಸ್ತೀಕನಲ್ಲಿ ಮೊರೆ. ಯಜ್ಞಶಾಲೆಗೆ ಆಸ್ತೀಕನ ಪ್ರವೇಶ.

'' ಸರ್ಪಯಾಗದಲ್ಲಿ ಎಲ್ಲ ಸರ್ಪಗಳೂ ಅಗ್ನಿಗೆ ಆಹುತಿಯಾದರೂ ತಕ್ಷಕನಿನ್ನೂ ಬರಲಿಲ್ಲ. ಏನಾದರೂ ಮಾಡಿ ತನ್ನ ಪರಮವೈರಿಯಾದ ಆ ತಕ್ಷಕನನ್ನು ಕರೆಸಲೇ ಬೇಕು, ಬೆಂಕಿಗೆ ಬೀಳಿಸಬೇಕು '' ರಾಜನಿಂದ ಒತ್ತಾಯ. ''ಇಂದ್ರನಲ್ಲಿ ಆಶ್ರಯ ಪಡೆದಿದ್ದಾನೆ. ಹಾಗಾಗಿ ತಪ್ಪಿಸಿಕೊಳ್ಳುತ್ತಿದ್ದಾನೆ. '' - ಎಂದು ಋಷಿಗಳು . '' ಆ ಇಂದ್ರನಿಂದ ಸಹಿತವಾಗಿಯೇ ತಕ್ಷಕನನ್ನು ಆಕರ್ಷಿಸಿರಿ '' ಎಂದ ಜನಮೇಜಯ. ಸರಿ, ''ಸಹೇಂದ್ರಾಯ ತಕ್ಷಕಾಯ ಸ್ವಾಹಾ'' ಎಂದರು ಋಷಿಗಳು.



ಇಂದ್ರ ಕಂಗಾಲಾದ. ತನ್ನನ್ನು ಬಲವಾಗಿ ಅಪ್ಪಿಕೊಂಡಿದ್ದ ತಕ್ಷಕನನ್ನು ಕೊಡವಿ ಹಾಕಿದ. ತಕ್ಷಕ ವಿಲಿವಿಲಿ ಒದ್ದಾಡುತ್ತಾ ಅಗ್ನಿಗೆ ನೇರವಾಗಿ ಬೀಳತೊಡಗಿದ. ಅಷ್ಟರಲ್ಲಿ ಆಸ್ತೀಕನ ಪ್ರವೇಶ. ಜನಮೇಜಯನ ಸರ್ಪಯಾಗದ ಪ್ರಶಂಸೆ. ಆಸ್ತೀಕನ ತೇಜಸ್ಸು, ಗಾಂಭೀರ್ಯಗಳಿಗೆ ಮಾರು ಹೋದ ಜನಮೇಜಯ-'' ಏನು ಬೇಕಾದರೂ ವರ ಕೇಳು'' ಎಂದಿದ್ದಾನೆ. ''ವರಕೊಡುವಿಯಾದರೆ ಈ ಕ್ಷಣದಲ್ಲಿ ಈ ಸರ್ಪಯಾಗ

ನಿಲ್ಲಲಿ" ಆಸ್ತಿಕನ ವರಯಾಚನೆ. ಜನಮೇಜಯನಿಗೆ ಬಲು ಯೋಚನೆ. ತಕ್ಷಕನೆ ಬಂದಿಲ್ಲ. ಉದ್ದೇಶ ನೆರವೇರದೇ ಸರ್ಪಯಾಗ ಸಮಾಪ್ತಿ ಹೇಗೆ ? ವರ ಕೊಡದೆ ಕೊಟ್ಟ ಮಾತು ಮೀರುವುದು ಹೇಗೆ ? ಉಭಯ ಸಂಕಟ. ಕೊನೆಗೂ ಆಸ್ತೀಕನಿಗೆ ವರ ಪ್ರದಾನ. ತಕ್ಷಕನ ಆಗಮನವಿಲ್ಲದೇ ಸರ್ಪಯಾಗದ ಸಮಾಪ್ತಿಯಾಯಿತು. ಆಸ್ತೀಕನ ತಪಸ್ಸಿನ ಫಲವಾಗಿ ಸರ್ಪವಂಶಕ್ಕೆ ಉಳಿಗಾಲ ದೊರೆಯಿತು.

ಯಾಗ ಸಮಾಪ್ತಿಯಾಗುತ್ತಿರುವಂತೆ ವೇದವ್ಯಾಸರ ಆಗಮನ. ಋಷಿಗಳ ಮೊರೆಯಂತೆ ತನ್ನಿಂದ ಉಪದೇಶ ಪಡೆದ ವೈಶಂಪಾಯನರಿಗೆ ಆಜ್ಞೆ ನೀಡಿ ಮಹಾಭಾರತ ಹೇಳಿಸಿದರು - ಭಗವಾನ್ ವ್ಯಾಸರು.

ನಾವೂ ಜನಮೇಜಯನಂತೆ ಸರ್ಪಯಾಗವನ್ನು ನಡೆಸಬೇಕು. ಆಸೆಗಳೇ ಸರ್ಪಗಳು. ಆ ತಕ್ಷಕ ಸಣ್ಣಕ್ರಿಮಿಯಾಗಿ ಪ್ರವೇಶಿಸಿ ಮತ್ತೆ ದೊಡ್ಡದಾಗಿ ಪರೀಕ್ಷಿತ್ ರಾಜನನ್ನು ಕೊಂದು ಹಾಕಿತು. ನಮ್ಮಲ್ಲಿಯೂ ಈ ಕಾಮನೆಗಳೂ ಸಣ್ಣದಾಗಿ ಪ್ರವೇಶಿಸಿ ಮತ್ತೆ ಪೆಡಂಭೂತವಾಗಿ ಬೆಳೆದು, ಪರೀಕ್ಷಿತ್‌ನನ್ನು ಅಂದರೆ ವಿವೇಕವನ್ನು ನಾಶಗೊಳಿಸುತ್ತದೆ. ಆದ್ದರಿಂದಲೇ ನಾವೂ ಸರ್ಪಯಾಗ ನಡೆಸಿ ಎಲ್ಲ ಕಾಮನೆಗಳನ್ನೂ ಭಸ್ಮಗೊಳಿಸಬೇಕು. ಒಬ್ಬ ತಕ್ಷಕ ಪರೀಕ್ಷಿತ್‌ನನ್ನು ಕೊಂದರೆ ಅವನ ಎಲ್ಲ ಸಂಬಂಧಿಗಳೂ ಆಹುತಿಯಾದಂತೆ, ಈ ಸ್ವಾರ್ಥಕಾಮನೆಗಳಿಗೆ ಸಂಬಂಧಪಟ್ಟ ಎಲ್ಲ ವಸ್ತುಗಳನ್ನೂ ಬಲಿಕೊಡಬೇಕು - ಅಂದರೆ ಬಿಡಬೇಕು. ಎಲ್ಲಿಯವರೆಗೆ ? ಆಸ್ತೀಕ ಬರುವವರೆಗೆ. ಆಸ್ತಿಕ್ಯ ಬರುವವರೆಗೆ. ಅಂದರೆ ಭಗವಂತನ ಭಕ್ತಿಗೆ ಅವಿರೋಧಿಯಾದ ಕಾಮನೆಗಳನ್ನು ಬಿಡಬೇಕಾಗಿಲ್ಲ.

ಸರ್ಪಯಾಗ ಮುಗಿದ ಕೂಡಲೇ ವೇದವ್ಯಾಸರು ಬಂದರು. ನಾವು ಈ ಆಸೆಗಳ ಸರ್ಪಯಾಗ ಮುಗಿಸಿದಾಗಲೇ ಭಗವಂತನು ನಮ್ಮಲ್ಲಿಗೆ ಬರುವುದು. ಗುರುಗಳ ಮೂಲಕ ತತ್ತ್ವಜ್ಞಾನ ದೊರಕುವಂತೆ ಅನುಗ್ರಹಿಸುತ್ತಾನೆ - ವೈಶಂಪಾಯನರ ಮೂಲಕ ಮಹಾಭಾರತ ಹೇಳಿಸಿದಂತೆ. ಆದುದರಿಂದ ಭಗವಂತ ಬರಬೇಕಾದರೆ, ತತ್ತ್ವಜ್ಞಾನ ದೊರೆಯಬೇಕಾದರೆ ನಾವು ಮೊದಲು ಸರ್ಪಯಾಗ-ಆಸೆಗಳ ಹೋಮ ನಡೆಸಬೇಕು. □

# ಹಾಲಿನ ಸವಿಕಂಡ ಅಶ್ವತ್ಥಾಮ

ಕುರುಕುಲದ ರಾಜಕುಮಾರರೆಲ್ಲ ಆಟವಾಡುತ್ತಿದ್ದರು. ರಾಜಕುಮಾರರಿಗೆ ತಾಯಿಕೊಟ್ಟ ರುಚಿಯಾದ ಹಾಲು ಕುಡಿದ ಹುಮ್ಮಸ್ಸು. ಯಾರಲ್ಲಿಯೂ ಏನನ್ನೂ ಬೇಡದ ಬಡ ದ್ರೋಣಾಚಾರ್ಯರ ಪುತ್ರ ಅಶ್ವತ್ಥಾಮನಿಗೆ ರಾಜಕುಮಾರರು ಕುಡಿದ ಹಾಲಿನ ರುಚಿ ಏನು ಗೊತ್ತು? ಆದರೆ ಅವರೆದುರು ತಾನೇನು ಕಮ್ಮಿ? ನಾನೂ ಅವರಂತೆ ಹಾಲು ಕುಡಿಯಬೇಕೆಂಬ ಹಮ್ಮು ಅವನದು. ಅದಮ್ಯ ಆಕಾಂಕ್ಷೆ.

ಮನೆಯಲ್ಲಿ ಬಡತನವಿದ್ದರೂ ಮಗನ ಕೋರಿಕೆಯನ್ನು ಪೂರೈಸಲು ತಾಯಿ ಹಿಂಜರಿಯಲಿಲ್ಲ. ಬಿಳಿ ಹಿಟ್ಟಿಗೆ ನೀರು ಬೆರಸಿ ಕೊಟ್ಟಿದ್ದಾಳೆ. ಹಾಲನ್ನೇ ಕಂಡರಿಯದ ಅಶ್ವತ್ಥಾಮನಿಗೆ ಇದೇ ಉತ್ತಮ ಹಾಲು. ಕುಡಿದೇ ಕುಡಿದ. ಹಿರಿ ಹಿರಿ ಹಿಗ್ಗಿದ.

ಈ ಬಡ ಋಷಿಕುಮಾರನಿಗೆ ಹಾಲು ಎಲ್ಲಿಂದ? ಹಸುವನ್ನು ಕಾಣುವುದೇ ಇವನಿಗೆ ದೊಡ್ಡ ಭಾಗ್ಯ. ಹಾಲು ಕುಡಿಯುವ ಭಾಗ್ಯ ಎಲ್ಲಿಂದ ಬರಬೇಕು? ರಾಜಕುಮಾರರಿಗೆ ಆಶ್ಚರ್ಯ, ಸಂಶಯ.

ಅಶ್ವತ್ಥಾಮನ ಹಾಲಿನ ರಹಸ್ಯವನ್ನು ಅರಿಯುವ ತವಕ, ಕಾತರ ರಾಜಕುಮಾರರಿಗೆ. ಒಮ್ಮೆ ತಾವು ಕುಡಿಯುತ್ತಿದ್ದ ಹಾಲನ್ನು ಕೊಟ್ಟಿದ್ದಾರೆ, ಅಶ್ವತ್ಥಾಮನಿಗೆ.

ಅಹೋ! ಎಷ್ಟು ಮಧುರ ಈ ಹಾಲು ! ಇದರ ಮಾಧುರ್ಯ ಎಲ್ಲಿ? ನಾನು ಕುಡಿಯುತ್ತಿದ್ದ ಹಾಲಿನ ರುಚಿ ಎಲ್ಲಿ? ಹಾಗಾದರೆ ತಾಯಿ ನನಗೆ ಮೋಸ ಮಾಡಿದ್ದಾಳೆ. ಇನ್ನು ನಾನು ಆ ಹಾಲನ್ನು ಖಂಡಿತ ಕುಡಿಯಲಾರೆ.

ಎಂದಿನಂತೆ ತಾಯಿ ಹಾಲು ಕೊಟ್ಟಿದ್ದಾಳೆ. ಸಿಡಿ ಮಿಡಿಯಾದ ಅಶ್ವತ್ಥಾಮ ಹಾಲನ್ನು ಚೆಲ್ಲಿದ್ದಾನೆ. ರಾಜಕುಮಾರರು ಕುಡಿಯುವ ಹಾಲೇ ಬೇಕು. ಸಾಕು ಈ ವಂಚನೆ. ತಾಯಿ ತಬ್ಬಿಬ್ಬಾಗಿದ್ದಾಳೆ. ಅಶ್ವತ್ಥಾಮ ಹಟ ಹಿಡಿದಿದ್ದಾನೆ.

ಅಶ್ವತ್ಥಾಮನಿಗೆ ಹಾಲು ಬೇಕು. ಆದರೆ ಯಾವುದು ಹಾಲು? ತಿಳಿದಿಲ್ಲ. ನಿಜವಾದ ಹಾಲಿನ ರುಚಿ ತಿಳಿದಾಗ-ಬೇಡೆಂದ. ಉತ್ತಮ ಹಾಲೇ ಬೇಕೆಂದು ಹಟಹಿಡಿದ.



ನಮಗೂ ಸುಖ ಬೇಕು. ಯಾವುದು ಸುಖ ? ತಿಳಿದಿಲ್ಲ. ದುಃಖ ಮಿಶ್ರವಾದ ಕ್ಷಣಿಕವಾದ ಸಂಸಾರದ ಸುಖವನ್ನೇ ನಿಜವಾದ ಸುಖವೆಂದು ಭ್ರಮಿಸಿದ್ದೇವೆ. ದುಃಖದ ಸೋಂಕೂ ಇಲ್ಲದ ಮೋಕ್ಷರೂಪವಾದ ಉತ್ತಮ ಸುಖದ ರುಚಿ ಗೊತ್ತಿಲ್ಲ. ಆ ಆತ್ಮಸ್ವರೂಪವಾದ ಸುಖದ ಅನುಭವವಾದರೆ ಈ ಸಾಂಸಾರಿಕ ಸುಖದ ಕಡೆ ದೃಷ್ಟಿ ಹಾಯಿಸುವುದಿಲ್ಲ. ಮೋಕ್ಷವೇ ಬೇಕೆಂಬ ಛಲ ಹುಟ್ಟುತ್ತದೆ.



# ಶಂಖಲಿಖಿತರು

ಶಂಖ-ಲಿಖಿತರು ಸಹೋದರ ಋಷಿ ಕುಮಾರರು. ಇಬ್ಬರಿಗೂ ನದೀ ತೀರದಲ್ಲಿ ಫಲಪುಷ್ಪ ಸಮೃದ್ಧವಾದ ಒಂದೊಂದು ತೋಟಗಳಿದ್ದವು.

ಒಮ್ಮೆ ಶಂಖ ಕಾರ್ಯಾಂತರ ನಿಮಿತ್ತವಾಗಿ ಆಶ್ರಮದಿಂದ ಹೊರಹೋಗಿದ್ದ. ಲಿಖಿತ ಸುಮ್ಮನೇ ಶಂಖನ ತೋಟಕ್ಕೆ ಬಂದ, ಓಡಾಡಿದ. ಒಳ್ಳೆ ಪಕ್ವ ಮಾವಿನ ಹಣ್ಣುಗಳಿಂದ ತೋಟದ ಮಾವಿನ ಮರವೆಲ್ಲ ಶೋಭಿಸುತ್ತಿದ್ದವು. ಲಿಖಿತನ ಬಾಯಿ ನೀರೂರಿತು. ಕೈ ಮುಂದೆ ಹೋಯಿತು. ಮಾವಿನ ಮರದಲ್ಲಿದ್ದ ಐದಾರು ಹಣ್ಣುಗಳನ್ನು ಕಿತ್ತು ಕೊಂಡಿತು. ಬಾಯಲ್ಲೊಂದು, ಕೈಯಲ್ಲಿ ಹಲವು. ನನ್ನ ಅಣ್ಣನ ತೋಟವಲ್ಲವೇ ? ಕಿತ್ತರೆ ತಪ್ಪೇನು ? ಎನಿಸಿತು.

ಶಂಖ ತನ್ನ ಕಾರ್ಯ ಮುಗಿಸಿಕೊಂಡು ಆಶ್ರಮಕ್ಕೆ ಹಿಂತಿರುಗಿದ. ಲಿಖಿತನ ಕೈಯಲ್ಲಿ ಹಣ್ಣು ಕಂಡ. '' ಬಹಳ ರುಚಿಯಾಗಿದೆ. ನೀನೂ ತೆಗೆದುಕೋ'' ಎಂದ ಲಿಖಿತ. '' ತೆಗೆದುಕೊಳ್ಳುವುದಿರಲಿ, ಈ ಹಣ್ಣುಗಳು ಯಾರ ತೋಟದ್ದು? ಅದನ್ನು ಮೊದಲು ಹೇಳು'', '' ನಿನ್ನ ತೋಟದ್ದು. ಪಕ್ವ ಫಲಗಳು ಸುಂದರವಾಗಿ ಕಂಡವು. ಅಣ್ಣನ ತೋಟ ತಾನೆ ಎಂದು ಕಿತ್ತು ತಿಂದೆ''.

'' ಹಣ್ಣು ತಿಂದಿದ್ದಕ್ಕೆ ಬೇಸರವಿಲ್ಲ. ಆದರೆ ಅದರ ಒಡೆಯನನ್ನು ಕೇಳದೇ ಕಿತ್ತಿದ್ದು ತಪ್ಪು. ನಾನು ಅಣ್ಣನೇ ಆಗಿರಬಹುದು. ಆದರೆ ಮತ್ತೊಬ್ಬರ ವಸ್ತುವನ್ನು ಕೇಳದೆ ತೆಗೆಯುವ ಅಭ್ಯಾಸ ಕಳ್ಳತನ ಮಾಡಿದಂತೆ. ಕಳ್ಳತನ ಮಾಡಿರುವ ನೀನು ಅಪವಿತ್ರ. ನಿನ್ನ ಮುಖ ನೋಡಬಾರದು. ನೋಡುವುದಿಲ್ಲ. ರಾಜನಲ್ಲಿ ಹೋಗಿ ನೀನು ಮಾಡಿರುವ ಅಪರಾಧವನ್ನು ಹೇಳಿ ಶಿಕ್ಷೆ ಪಡೆದು ಬಾ. ನಂತರ ನನಗೆ ಮುಖ ತೋರಿಸು, ಮಾತನಾಡಿಸು, ಹೋಗು ಇಲ್ಲಿಂದ.''

ಶಂಖನ ಮಾತು ಸರಿ ಎನಿಸಿತು. ತಾನು ಮಾಡಿದ ಅಪರಾಧದ ಅರಿವಾಯಿತು. ಶಿಕ್ಷೆ ಪಡೆಯಲು ರಾಜನ ಬಳಿ ಹೋದ.

"ತಪಸ್ವಿ ಋಷಿ ಕುಮಾರರು ತಾವಾಗಿಯೇ ರಾಜನ ಅರಮನೆಯ ಬಾಗಿಲಿಗೆ ಬಂದಿರುವುದು ರಾಜನಾದ ನನ್ನ ಭಾಗ್ಯವೇ ಸರಿ. ಬನ್ನಿ, ಅರ್ಘ್ಯ ಪಾದ್ಯಗಳನ್ನು ಸ್ವೀಕರಿಸಿ. ತಾವಾಗಿಯೇ ಬಂದಿರುವುದನ್ನು ಗಮನಿಸಿದರೆ ವಿಶಿಷ್ಟ ಬೇಡಿಕೆ ಇರುವಹಾಗಿದೆ. ಏನು ಬೇಕಾದರೂ ಕೇಳಿ. ಖಂಡಿತ ಕೊಡುತ್ತೇನೆ. ತಮ್ಮ ಬಯಕೆಯನ್ನು ಪೂರೈಸಿ ಕೃತಕೃತ್ಯನಾಗುತ್ತೇನೆ. ಧನ್ಯನಾಗುತ್ತೇನೆ. "



" ಈ ಮಾತು ಸತ್ಯವೇ ತಾನೆ. ನಾನು ಕೇಳಿದ್ದನ್ನು ಖಂಡಿತ ಕೊಡುವೆಯಾ. ಭಾಷೆ ಕೊಡು. ಕೇಳಿದ ಮೇಲೆ ಕೊಡಲು ಹಿಂಜರಿದರೆ ಸತ್ಯವಚನ ಭಂಗವಾಗುತ್ತದೆ. ಎಚ್ಚರಿಕೆ ! ನನಗೆ ನಿನ್ನ ಯಾವ ಧನಕನಕಗಳು ಬೇಡ. ನನ್ನ ಈ ಎರಡು ಕೈಗಳನ್ನು ಕತ್ತರಿಸಬೇಕು."

" ಇದು ದಾನವಲ್ಲ ಋಷಿಗಳೇ. ಆದರೆ ಇವನ್ನೂ ನಾವು ನಮ್ಮ ರಾಜ್ಯದಲ್ಲಿ ಕೊಡುತ್ತೇವೆ. ಆದರೆ ಅದು ನಿಮಗಲ್ಲ. ಕಳ್ಳತನ ಮಾಡಿದವರಿಗೆ. ಬೇರೆ ಏನನ್ನು ಬೇಕಾದರೂ ಕೇಳಿ. "

" ನಾನೂ ಕಳ್ಳನೇ. ಯಾರನ್ನೂ ಕೇಳದೆ ನನ್ನ ಅಣ್ಣನ ತೋಟದಿಂದ ಹಣ್ಣು ತೆಗೆದಿದ್ದೇನೆ. ಆದುದರಿಂದಲೇ ಕೈ ಕತ್ತರಿಸುವಂತೆ ಒತ್ತಾಯ ಪಡಿಸುತ್ತಿದ್ದೇನೆ. ಕೇಳಿದುದನ್ನು ಬಿಟ್ಟು ಬೇಡದ ವಸ್ತುವನ್ನು ಕೊಡುತ್ತೇನೆಂದರೆ ಹೇಗೆ? "

" ರಾಜನಿಗೆ ರೋಮಾಂಚ. ಉಭಯ ಸಂಕಟ. ಶಾಪದ ಭಯ. ಲಿಖಿತ ಕೇಳಿದಂತೆ ಕೈ ಕತ್ತರಿಸಲು ಆಣತಿಯಿತ್ತ ಭೃತ್ಯರಿಗೆ ".

ರಾಜನನ್ನು ಹರಸಿ ಅಣ್ಣ-ಶಂಖನ ಬಳಿ ಬಂದು "ಶಿಕ್ಷೆಪಡೆದು ಬಂದಿದ್ದೇನೆ. ಮನ್ನಿಸಬೇಕು, ಸ್ವೀಕರಿಸಬೇಕು, ಅನುಗ್ರಹಿಸಬೇಕು.".

ಭಲೇ! ಅನುಜ. ನನ್ನ ತಮ್ಮನಾದದ್ದಕ್ಕೆ ಸಾರ್ಥಕ. ನಿನ್ನ ಪ್ರಾಮಾಣಿಕತೆಗೆ ಮೆಚ್ಚಿದೆ. ಶಿಕ್ಷೆ ಪಡೆದ ನೀನು ಬೆಂಕಿಗೆ ಇಟ್ಟ ಚಿನ್ನದಂತೆ ಪರಿಶುದ್ಧ. ನಮ್ಮ ವಂಶದಲ್ಲಿ ಕಳ್ಳತನದಂತಹ ನೀಚ ಕೃತ್ಯವನ್ನು ಮಾಡಿದವರಿಲ್ಲ. ಅಂತಹ ವಂಶದಲ್ಲಿ ಬಂದ ನಾವು ಕಲಂಕ ಹಚ್ಚಬಾರದು. ಈ ಕಾರಣದಿಂದ ನಾನು ನಿನಗೆ ಭರ್ತ್ಸನೆಗೈದೆ. ಹಾಗೆಂದು ಬೇಸರಿಸಬೇಡ. ನಿನ್ನಮೇಲೆ ಕೋಪವಿಲ್ಲ. ಹೋಗು ನದಿಯಲ್ಲಿ ಸ್ನಾನಮಾಡಿ ಬಾ.

ಮನಸ್ಸು ಪ್ರಸನ್ನವಾಯಿತು. ಲಿಖಿತ ಸ್ನಾನಕ್ಕೆ ಹೋದ. ಸ್ನಾನ ಮಾಡಿದ. ಆಶ್ಚರ್ಯ! ಸಂತೋಷ !ನಂಬಲಾಗದ ಸತ್ಯ! ಕತ್ತರಿಸಲ್ಪಟ್ಟ ಕೈಗಳೂ ಬಂದಿವೆ. ಓಡಿ ಬಂದ ಅಣ್ಣನ ಬಳಿಗೆ. ಇಬ್ಬರಿಗೂ ಸಂತೋಷ. ಅಂದಿನಿಂದ ಆ ನದಿ ಬಾಹುಲನದಿ ಎನಿಸಿತು. ಬಾಹು ನೀಡಿದ ನದಿಯಲ್ಲವೇ ?

ಕಥೆಯನ್ನು ಕೇಳಿದೆಯಾ ಯುಧಿಷ್ಠಿರ ? ತಮ್ಮ ತಪ್ಪು ಮಾಡಿದಾಗ ಅವನ ಕೈ ಕತ್ತರಿಸುವಂತೆ ಮಾಡಿದ ಅಣ್ಣನಿಗೆ ಪಾಪ ಬಂತೆ ? ಅನ್ಯಾಯ ಮಾಡಿದಾಗ ಶಿಕ್ಷೆ

ಕೊಟ್ಟರೂ ಪಾಪ ಬರುವುದಿಲ್ಲ. ಪುಣ್ಯ ಬರುತ್ತದೆ. ಘೋರ ಅನ್ಯಾಯ ಮಾಡಿದ, ದುರ್ಯೋಧನಾದಿಗಳನ್ನು ಇದಕ್ಕೆ ಸಹಕಾರಿಗಳಾದ ಭೀಷ್ಮ ದ್ರೋಣಾದಿಗಳನ್ನೂ ಯುದ್ಧದಲ್ಲಿ ಹಿಂಸಿಸಿದುದರಿಂದ ಯಾವ ಪಾಪಗಳೂ ಬರುವುದಿಲ್ಲ. ನಿಶ್ಚಿಂತನಾಗು.

ಮಹಾಭಾರತದ ಯುದ್ಧ ಮುಗಿಸಿ ಅನೇಕರ ಸಂಹಾರಕ್ಕೆ ಕಾರಣನಾದ ನಾನು ಕಡುಪಾಪಿ ಎಂದು ಹೆದರಿದ್ದ ಚಿಂತೆಗೊಳಗಾಗಿದ್ದ ಯುಧಿಷ್ಠಿರನಿಗೆ ಶ್ರೀವ್ಯಾಸರು ಈ ಉಪದೇಶ ಕೊಟ್ಟರು.

ಸ್ವಂತ ಅಣ್ಣನ ತೋಟದಲ್ಲಿ ಕೇಳದೇ ಹಣ್ಣು ಕಿತ್ತಿದ್ದ ಲಿಖಿತ ತಾನಾಗಿಯೇ ತನ್ನ ಅಪರಾಧವನ್ನು ಒಪ್ಪಿ ಶಿಕ್ಷೆ ಪಡೆದ.

ಭಗವಂತನ ಸ್ವಾಮ್ಯಕ್ಕೆ ಒಳಪಟ್ಟ ಈ ಜಗತ್ತಿನಲ್ಲಿ ಇರುವ ಪದಾರ್ಥಗಳನ್ನೆಲ್ಲ ನಮ್ಮ ವಸ್ತುಗಳೇ ಎಂಬಂತೆ ಭಗವಂತನ ಮಾತು ಕೇಳದೇ ಸ್ವಕರ್ತವ್ಯ ಮಾಡದೇ ಶ್ರೀಹರಿಯ ಅನುಮತಿ ಪಡೆಯದೇ ಭೋಗಿಸುವ ನಮ್ಮಲ್ಲಿ, ಶಿಕ್ಷೆ ಪಡೆಯುವುದಿರಲಿ ಅಪರಾಧವನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆಯಾದರೂ ಇದೆಯೇ?

ಘೋರ ಅಪರಾಧ ಮಾಡಿದರೂ ಲಂಚಕೊಟ್ಟು ನ್ಯಾಯಾಲಯದಿಂದಲೇ ನಿರಪರಾಧಿಗಳೆಂದು ಸಾಬೀತುಪಡಿಸುವ ನಮ್ಮ ಸಾಹಸ, ಧೈರ್ಯಗಳು ಪಾಪ ಆ ಲಿಖಿತನಿಗೆ ತಿಳಿದಿರಲಿಲ್ಲವೇನೋ ?

ಎಷ್ಟಾದರೂ 20ನೇ ಶತಮಾನದ ನಾವು ಮುಂದುವರೆದವರು. ನಮಗಿರುವ ಪ್ರತಿಭೆ, ಪಾಂಡಿತ್ಯ, ವೈಚಾರಿಕತೆ ಗತಕಾಲದ ಗೊಡ್ಡು ಋಷಿಗಳಿಗೆ ಎಲ್ಲಿಂದ ಬರಬೇಕು. ಮಹಾಭಾರತದ ನಡೆದ ಕಾಲಕ್ಕೂ ನಮಗೂ 5,000 ವರ್ಷಗಳ ಅಂತರವಾದರೆ ಮಹಾಭಾರತದ ಆದರ್ಶಕ್ಕೂ ನಮಗೂ 10,000 ವರ್ಷಗಳ ಅಂತರ ! ನಮ್ಮ ದೇಶ ಪ್ರಗತಿಪಥದಲ್ಲಿದೆ!!

❀ ✠ ❀

# ಆಲಸ್ಯ ಸಲ್ಲದು

ಒಂದು ಉಷ್ಟ್ರ ; ಅಂದರೆ ಒಂಟೆ ಬ್ರಹ್ಮ ದೇವರನ್ನು ಕುರಿತು ತಪಸ್ಸನ್ನು ಮಾಡಿತು. ಒಂಟೆಯ ಉಗ್ರ ತಪಸ್ಸಿಗೆ ಬ್ರಹ್ಮದೇವ ಒಲಿದು ಪ್ರತ್ಯಕ್ಷನಾದ.

ಬ್ರಹ್ಮದೇವ - ನಿನ್ನ ತಪಸ್ಸು ಮೆಚ್ಚುಗೆಯಾಗಿದೆ, ಏನು ನಿನ್ನ ಬಯಕೆ ?

ಒಂಟೆ - ಬ್ರಹ್ಮನ್ ! ಅಂಥ ದೊಡ್ಡ ಬಯಕೆಯೇನೂ ಅಲ್ಲ. ನನಗೆ ಆಹಾರಕ್ಕಾಗಿ ಕಾಡೆಲ್ಲ ಸುತ್ತಿ ಸುತ್ತಿ ಆಯಾಸವಾಗಿದೆ. ಇನ್ನು ಮೇಲೆ ಕುಳಿತಲ್ಲೇ ಆಹಾರ ಸ್ವೀಕಾರ ಮಾಡುವ ಅನುಕೂಲತೆ ಬೇಕು. ಅಂದರೆ ಆಹಾರ ಪದಾರ್ಥ ಎಷ್ಟೇದೂರ ಇರಲಿ ಕುಳಿತಲ್ಲಿಂದಲೇ ಅದನ್ನು ತಿನ್ನಲು ಅನುಕೂಲವಾಗುವಂತೆ ನನ್ನ ಕುತ್ತಿಗೆಯನ್ನು ಬಹಳ ಉದ್ದವಾಗಿಸಬೇಕು.

ಬ್ರಹ್ಮ - ತಥಾಸ್ತು

ಅಂದಿನಿಂದ ಒಂಟೆಗೆ ಆಹಾರ-ಅನ್ವೇಷಣೆ ಪ್ರಯಾಸ ತಪ್ಪಿತು. ಕುಳಿತ ಸ್ಥಳದಿಂದಲೇ ತನ್ನ ಕುತ್ತಿಗೆಯನ್ನು ಕಾಡೆಲ್ಲ ಚಾಚಿ ಆಹಾರ ಸ್ವೀಕಾರಮಾಡಲು ಪ್ರಾರಂಭಿಸಿತು. ಇದರಿಂದ ದೇಹಕ್ಕೆ ಯಾವ ಶ್ರಮ, ವ್ಯಾಯಾಮಗಳೂ ಇಲ್ಲದೇ ಬರ ಬರುತ್ತ ಉದಾಸೀನದ ಮುದ್ದೆಯಾಯಿತು ಒಂಟೆ.

ಒಮ್ಮೆ ಆ ಒಂಟೆಗೆ ಗ್ರಹಚಾರ ಕೆಟ್ಟಿತ್ತು. ಅದೊಂದು ದಿನ ಸಮೀಪದಲ್ಲಿ ಎಲ್ಲಿಯೂ ಆಹಾರ ದೊರಕಲಿಲ್ಲ. ಬೆಳೆದ ಉದ್ದ ಕುತ್ತಿಗೆ ಕಾಡೆಲ್ಲ ಆಹಾರಕ್ಕಾಗಿ ತಡಕಾಡಿತು. ಬಹಳ ದೂರದವರೆಗೆ ಆಹಾರಕ್ಕಾಗಿ ಕುತ್ತಿಗೆ ಚಾಚಿತ್ತು. ಇದೇ ಸಂದರ್ಭದಲ್ಲಿ ಕಾಡಿನ ದೊಡ್ಡ ಮೃಗವೊಂದು ಆಹಾರ ಹುಡುಕುತ್ತಾ ಬಂತು. ದಾರಿಗೆ ಅಡ್ಡವಾಗಿ ಬಿದ್ದಿದ್ದ ಒಂಟೆಯ ಕುತ್ತಿಗೆಯಿತ್ತು. ಮಾಂಸಾಹಾರಿಯಾದ ಆ ಮೃಗ ಯಾವುದೋ ಪ್ರಾಣಿ ದೊರಕಿತೆಂಬ ಸಂತೋಷದಿಂದ ಆ ಕುತ್ತಿಗೆಗೆ ಬಾಯಿ ಹಾಕಿತು. ಇದನ್ನು ತಿಳಿದ ಒಂಟೆ ಕೂಡಲೇ ಕುತ್ತಿಗೆಯನ್ನು ಹಿಂತೆಗೆದುಕೊಳ್ಳಲು ಪ್ರಯತ್ನಿಸಿತು. ಆದರೆ ಬಹಳ

ದೂರ ಚಾಚಿದ್ದ ಆ ಕುತ್ತಿಗೆ ಅಷ್ಟರಲ್ಲಿ ಆ ಕಾಡು ಮೃಗದ ಆಕ್ರಮಣದಿಂದಾಗಿ ಮಧ್ಯದಲ್ಲಿಯೇ ತುಂಡಾಯಿತು.



ಒಂಟೆಗೆ, ಈ ''ಗ್ರಹಚಾರಕ್ಕೆ ತಪಸ್ಸು ಮಾಡಿ ಬ್ರಹ್ಮನಿಂದ ವರ ಪಡೆದೆನಲ್ಲ! ದೇವರು ಕೊಟ್ಟಷ್ಟೇ ಸಾಕು 'ಎಂದು ಸುಮ್ಮನಿರಬೇಕಿತ್ತು.''. ಎಂದೆನಿಸಿತು.

ಆಲಸ್ಯ ಎಂದಿಗೂ ಸಲ್ಲದು. ನಾವೆಲ್ಲ ಈ ಒಂಟೆಯಂತೆಯೇ ಯಾವ ಪ್ರಯತ್ನ, ಪರಿಶ್ರಮಗಳನ್ನೂ ಮಾಡದೇ ಕುಳಿತಲ್ಲಿಯೇ ಉಂಡು ನಿದ್ರಿಸಬೇಕು ಎಂದು ಬಯಸುವವರು. ಈ ಆಲಸ್ಯತನದಿಂದಲೇ ಒಂಟೆಗೆ ಆ ಗತಿ ಬಂದದ್ದು. ಅದಕ್ಕೆಂದೇ ಆಲಸ್ಯವು ಮನುಷ್ಯನ ದೊಡ್ಡ ಶತ್ರು ಎನ್ನುವುದು.

ಇಂದೂ ದೇವರು ಪ್ರತ್ಯಕ್ಷರಾದರೆ, ಆಹಾರ ಪದಾರ್ಥಗಳಿಗಾಗಿ ಪೇಟೆಯೆಲ್ಲ ಸುತ್ತಾಡಿ ಆಯಾಸಗೊಂಡಿರುವ ನಾವು ಒಂಟೆ ಕೇಳಿದ ವರವನ್ನೇ ಕೇಳಬಹುದೇನೋ!



# ಅತಿಥಿಗಾಗಿ ಆತ್ಮಾಹುತಿ

ಅವನೊಬ್ಬ ಬೇಡ. ಅವನ ಹಿಂಸಾಪ್ರವೃತ್ತಿಯಿಂದ ಅವನು ತನ್ನ ಯಾವ ಬಂಧುಗಳಿಗೂ ಬೇಡ. ಬೇಟೆಗಾಗಿ ಪಂಜರ, ಬಲೆಗಳನ್ನು ಹೊತ್ತು ಅರಣ್ಯದಲ್ಲಿ ಅಲೆದಾಟ. ಇದ್ದಕ್ಕಿದ್ದಂತೆ ವಿಪರೀತ ಬಿರುಗಾಳಿ, ಮಳೆ, ನಿಂತ ಮರಗಳ ಕುಸಿತ. ಹಾರುತ್ತಿದ್ದ ಪಕ್ಷಿಗಳ ಪತನ. ಕೆಲವು ಗತಪ್ರಾಣ. ಕೆಲವು ಉದುರಿ ಮೃತಪ್ರಾಯ. ಕಾಡೆಲ್ಲ ಪ್ರವಾಹ. ಭಯಂಕರ ಸಿಡಿಲು. ಪ್ರಾಣಿಗಳ ಚೀರಾಟ. ಜೀವನದ ಹೋರಾಟ. ಬದುಕಲು ಹಾರಾಟ. ದಾರಿ ಕತ್ತಲೆ, ಕಾಡೆಲ್ಲ ಬತ್ತಲೆ. ವಿಪರೀತ ಚಳಿ. ಬೇಡ ಗಡಗಡ.

ಬೇಡನ ಸಮೀಪದಲ್ಲಿಯೇ ಹೆಣ್ಣು ಪಾರಿವಾಳವೊಂದು ಆ ಮರದಿಂದ ಬಿದ್ದಿತು. ನೋವು. ಭಯ, ನರಳಾಟ. "ದಯಾಮಯ" ಬೇಡನಿಂದ, ಆ ಅವಸ್ಥೆಯಲ್ಲಿಯೂ ಆಹಾರಕ್ಕಾಗಿ ಆ ಪಾರಿವಾಳದ ಅಪಹಾರ ! ಬಲೆಯಲ್ಲಿ ಬಂಧನ.

ಕ್ರಮೇಣ ಮಳೆ ಸ್ತಬ್ಧ. ಮಾರ್ಗ ಸ್ವಚ್ಛ. ಆಕಾಶ ಅಚ್ಛ. ಒಂದು ಮರದ ಬುಡಕ್ಕೆ ಬೇಡ. 'ವನಸ್ಪತಿದೇವತೆಯೆ ! ಇಲ್ಲಿ ನೆಲಸಿರುವ ಪಕ್ಷಿಗಳೇ ! ಶರಣಾಗತನಾಗಿ ಬಂದಿದ್ದೇನೆ ರಕ್ಷಿಸಿ –' ಹಸಿವು, ದಣಿವು, ತೃಷೆಗಳಿಂದ ಬಳಲಿದ ಬೇಡನ ಮೊರೆ.

"ಓ ಪ್ರಿಯೇ ! ಮನೆಬಿಟ್ಟು ಆಹಾರ ತರಲು ಹೋದ ನೀನು ಇನ್ನೂ ಬಂದಿಲ್ಲ. ವಿಪರೀತ ಗಾಳಿಮಳೆಗಳ ಮಧ್ಯೆ ಎಲ್ಲಿ ಸಿಲುಕಿದೆ ? ನೀನಿಲ್ಲದೇ ಮನೆಯೆಲ್ಲ ಭಣ ಭಣ. ಮನೆಯಲ್ಲಿ ಮಕ್ಕಳು, ಮೊಮ್ಮಕ್ಕಳು ಯಾರಿದ್ದರೇನು? ಹೆಂಡತಿಯಿಲ್ಲದಿದ್ದರೆ ಮನೆ ಶೂನ್ಯ. ನೀನಿಲ್ಲದಿದ್ದ ಮೇಲೆ ನಾನು ಯಾರಿಗಾಗಿ ಬದುಕಬೇಕು ?

ನನ್ನ ಹೆಂಡತಿ ತುಂಬ ಒಳ್ಳೆಯವಳು. ಪ್ರತಿನಿತ್ಯ ನಾನು ಉಂಡ ಮೇಲೆ ಅವಳು ಉಣ್ಣುವುದು. ನಾ ಮಲಗಿದ ಮೇಲೆ ಅವಳ ಮಲಗು, ನನ್ನ ನೆರಳಿನಂತೆ.

" ಪೂಜೆ, ಹೋಮ ಎಲ್ಲದಕ್ಕೂ ಹೆಂಡತಿ ಬೇಕು. ಖಾಯಿಲೆ ಬಂದಾಗ ಬದಿಯಲ್ಲಿ ಕುಳಿತು, ಸಮಾಧಾನಮಾಡುತ್ತಿದ್ದರೆ ಆ ಖಾಯಿಲೆ ಮಂಗಮಾಯ, ಅಂತಹ ನನ್ನಾಕೆ ಈಗ ಎಲ್ಲಿರುವಳೋ? ಹೇಗಿರುವಳೋ? "

- ಮರದ ಮೇಲಿರುವ ಗಂಡು ಪಾರಿವಾಳ ತನ್ನ ಪತ್ನಿಯನ್ನು ಕಳೆದುಕೊಂಡು ಬೊಬ್ಬಿಡುತ್ತಿದೆ.

" ನಾನುಃಖಂಡಿತವಾಗಿಯೂ ಬಹಳ ಪುಣ್ಯ ಮಾಡಿದ್ದೇನೆ. ನಾನಿಲ್ಲದಿರುವಾಗ ನನ್ನ ಗಂಡ ನನ್ನಲ್ಲಿ ಇರುವ ಇಲ್ಲದಿರುವ ಗುಣಗಳನ್ನು ಪ್ರಶಂಸೆಗೈಯ್ಯುತ್ತಿದ್ದಾನೆ. ಯಾರ ಪತಿ ಪರೋಕ್ಷದಲ್ಲಿಯೂ ಪತ್ನಿಯ ಬಗ್ಗೆ ಮೆಚ್ಚುಗೆಯ ಮಾತನಾಡುವನೋ, ಹೆಮ್ಮೆಪಡುವನೋ ಆಕೆಯ ಬಾಳು ಧನ್ಯ.

" ಓ ಪ್ರಿಯ ! ದುಃಖಿಸಬೇಡ. ನಾನೀಗ ಬೇಡನ ಪಂಜರದಲ್ಲಿದ್ದೇನೆ. ನಿನಗೊಂದು ಪುಣ್ಯದ ಕೆಲಸ ಕೊಡುತ್ತಿದ್ದೇನೆ. ಈಗ ಬೇಡ ಶರಣಾಗತನಾಗಿ ನಿನ್ನಲ್ಲಿ ಬಂದಿದ್ದಾನೆ. ಇವನನ್ನು ರಕ್ಷಿಸು. ಶರಣಾಗತರಕ್ಷಣೆಯಿಂದ ದೇವರು ಮೆಚ್ಚುತ್ತಾನೆ. ನನ್ನಾಸೆ ಬಿಟ್ಟು ಅವನನ್ನು ರಕ್ಷಿಸು . "

- ಬೇಡನ ಬಂಧನದೊಳಗಿದ್ದ ಪಾರಿವಾಳ ತನ್ನ ಗಂಡನಿಗೆ ಸಾಂತ್ವನಗೊಳಿಸಿ ಈ ಬೇಡಿಕೆಯನ್ನು ತಿಳಿಸಿತು.

ಕೂಡಲೇ ಮರದ ಮೇಲಿದ್ದ ಆ ಗಂಡು ಪಾರಿವಾಳದ ಆಗಮನ. ಅತಿಥಿಗೆ ಸ್ವಾಗತ. ಏನು ಮಾಡಬೇಕು ? - ಬೇಡನಿಗೆ ಉಪಚಾರ.

" ತುಂಬಾ ಚಳಿಯಾಗುತ್ತಿದೆ. ಮೈಕಾಯಿಸಿಕೊಳ್ಳಬೇಕು " - ಎಂದ ಬೇಡ. ಕೂಡಲೇ ಒಣಗಿದ ಎಲೆಗಳ ರಾಶಿ ಸಿದ್ಧ. ರಾಶಿಗೆ ಬೆಂಕಿ, ಉಜ್ವಲ ಜ್ವಾಲೆ. ಚಳಿ ಪರಿಹಾರ.

" ಚಳಿ ಹೋಯಿತು ತುಂಬ ಹಸಿವು ".

ಪಾರಿವಾಳಕ್ಕೆ ಪೇಚಾಟ - " ನಿನ್ನ ಹಸಿವನ್ನು ಇಂಗಿಸುವಷ್ಟು ಆಹಾರ ನಮ್ಮಲ್ಲಿ ಎಲ್ಲಿಂದ ಬರಬೇಕು ? ಅದೂ ಅಲ್ಲದೆ ನಾವು ನಿಮ್ಮಂತೆ ಆಹಾರವನ್ನು ಶೇಖರಿಸಿಡುವವರಲ್ಲ. ಅಂದಂದಿನ ಆಹಾರವನ್ನು ಅಂದಂದೇ ಹುಡುಕಿ ತಿನ್ನುವವರು". ಬೇಡನಿಗೆ ತಳಮಳ. ಪಕ್ಷಿಗೆ ಕಳವಳ. ತೀವ್ರಯೋಚನೆ, ಹೊಳೆಯಿತೊಂದು ಉಪಾಯ.



"ಅತಿಥಿ ! ಬೇಡ ಯೋಚನೆ. ತೀರಿಸುವ ಯೋಚನೆಗೆ ತಿಳಿಯಿತೊಂದು ಯೋಜನೆ. ಅಲ್ಲಿಯೆ ಉರಿಯುತ್ತಿದ್ದ ಬೆಂಕಿಗೆ ಮತ್ತೂ ಸ್ವಲ್ಪ ಒಣಗಿದ ಎಲೆ. ಜ್ವಾಲೆ ಪ್ರಜ್ವಾಲೆ. "ತೆಗೆದುಕೋ ; ನಿನ್ನ ಹಸಿವನ್ನು ಇಂಗಿಸಿಕೋ"-ಪಾರಿವಾಳವು ಬೆಂಕಿಗೆ.

ಅತಿಥಿಯನ್ನು ಸತ್ಕರಿಸಲು ಆತ್ಮಾಹುತಿ. ಬೇಡನಿಗೆ ಪಶ್ಚಾತ್ತಾಪ. ಪಶುವನ್ನು ಮೀರಿಸುವ ಪಶುತ್ವ ನನ್ನಲ್ಲಿ ! ಮಾನವನನ್ನೂ ಮೀರಿದ ಉದಾತ್ತತೆ ಪಶುವಿನಲ್ಲಿ ! ಛೇ ! ನಿಷ್ಕರುಣೆಯ ನನಗೆ ಧಿಕ್ಕಾರ. ಈ ಪಾರಿವಾಳವೇ ನನಗೆ ಗುರು. ಇದು ಕಲಿಸಿದ ಪಾಠವೇ ನನ್ನ ಜೀವನದ ದಾರಿದೀಪ. ಈ ಪಾರಿವಾಳ, ಈ ಪಂಜರ, ಈ ಬಲೆ ಸಾಕು. ಬೇಡನಿಗೆ ಈಗ ಯಾವುದೂ ಬೇಡ. ಬೇಡ ಈಗ ಎಲ್ಲರಿಗೂ ಬೇಕು.

ಇತ್ತ ಸತಿ ಪಾರಿವಾಳದ ಪ್ರಲಾಪ – "ಅಯ್ಯೋ ನನ್ನ ಭಾಗ್ಯದೇವ ! ನನ್ನನ್ನು ಬಿಟ್ಟು ಹೋದೆಯಾ ? ಎಷ್ಟು ಮಕ್ಕಳಿದ್ದರೇನು ಬಂತು ? ಪತಿ ಇಲ್ಲದ ಮೇಲೆ ಸತಿಗೆ ನಿರ್ಗತಿ. ಪ್ರಿಯನೇ ! ನನ್ನನ್ನು ಯಾವಾಗಲೂ ತುಂಬ ಪ್ರೀತಿಸುತ್ತಿದ್ದಿ. ಗೌರವಿಸುತ್ತಿದ್ದಿ. ನಾವಿಬ್ಬರೂ ಪರ್ವತದ ಶಿಖರಗಳಲ್ಲಿ, ಗವಿಗಳಲ್ಲಿ, ನದಿಗಳ ಜಲಪಾತಗಳ ಬದಿಗಳಲ್ಲಿ, ಮರದ ತುದಿಗಳಲ್ಲಿ, ಗಗನದಲ್ಲಿ ಪ್ರಪಂಚವನ್ನೇ ಮರೆತು ವಿಹರಿಸುತ್ತಿದ್ದೆವು. ಆದರೆ ಇಂದು ನಾನು ಏಕಾಂಗಿ. ಯಾರೊಡನೆ ಆ ಸುಖದ ಕ್ಷಣಗಳನ್ನು ಮತ್ತೆ ಕಳೆಯಲಿ ? ತಂದೆ, ಸಹೋದರ, ಸುತ ಎಲ್ಲರೂ ಕೊಡುವುದಕ್ಕೆ ಮಿತಿಯಿದೆ. ಇತಿಯಿದೆ. ಆದರೆ ಕೈಹಿಡಿದ ನಲ್ಲ ನೀಡುವುದಕ್ಕೆ ಎಲ್ಲೆಯುಂಟೇ? ಬೆಲೆಯುಂಟೇ? ಅದರ ಬೆಲೆ ಗಂಡಹೆಂಡರಿಗೇ ಗೊತ್ತು.

" ಓ ! ನನ್ನ ಸ್ವಾಮಿ ! ನೀನಿಲ್ಲದಿದ್ದ ಮೇಲೆ ನಾನೇಕೆ ಬದುಕಬೇಕು ? ಯಾರಿಗಾಗಿ ಬದುಕಬೇಕು? ಪತಿಹೀನಳಾಗಿ ಪತಿವ್ರತೆ ಬದುಕಲು ಬಯಸುವುದಿಲ್ಲ". – ಆಕ್ರಂದನ ಮಾಡುತ್ತಲೇ ಅದೇ ಬೆಂಕಿಗೆ ಇದೂ ಆಹುತಿ.

ತತ್‌ಕ್ಷಣದಲ್ಲಿ ಮೇಲಿಂದ ವಿಮಾನ. ಹೆಣ್ಣು ಪಾರಿವಾಳದ ಆರೋಹಣ. ಪಕ್ಕದಲ್ಲಿ ಪತಿ, ತುಂಬ ಸಂತಸ. ಪತಿಯೊಂದಿಗೆ ಆನಂದದಿಂದ ಸ್ವರ್ಗಾರೋಹಣ.

ಪಾರಿವಾಳಗಳ ಸ್ವರ್ಗಾರೋಹಣವನ್ನು ಕಂಡ ಬೇಡನಿಗೆ ತಾನೂ ಹೀಗೆ ಉತ್ತಮಗತಿಯನ್ನು ಹೊಂದಬೇಕೆಂಬ ಹಂಬಲ. ಸಾಧನೆಯ ಬೆಂಬಲ. ಒಮ್ಮೆ ಆಕಸ್ಮಿಕ ಕಾಡ್ಗಿಚ್ಚು. ಬೇಡನಿಂದ ಅಗ್ನಿಪ್ರವೇಶ. ಸ್ವರ್ಗಕ್ಕೆ ಸೇರ್ಪಡೆ. ಸಂತೃಪ್ತಿ.

ಪಾರಿವಾಳದ ಸದ್ವರ್ತನೆ. ಬೇಡನ ಪರಿವರ್ತನೆ. ಶರಣಾಗತ–ಶತ್ರುವಾಗಿದ್ದರೂ ಹಂಗಿಸದೆ ರಕ್ಷಿಸಿದರೆ ಮನಸ್ಸು ಬದಲಾಗಿ ಮಿತ್ರನಾಗಬಹುದು.

# ಅಲ್ಪರಿಗೆ ಅಧಿಕಾರ ಸಲ್ಲದು

ಋಷಿಯೊಬ್ಬ ತಪಸ್ಸು ಮಾಡುತ್ತ ಕುಳಿತಿದ್ದನು. ಅವನ ಉಗ್ರ ತಪಸ್ಸಿಗೆ ಹೆದರಿ ಆ ಅರಣ್ಯದಲ್ಲಿ ಅವನ ಹತ್ತಿರದಲ್ಲಿ ಯಾವ ಪ್ರಾಣಿಯೂ ಸುಳಿಯುತ್ತಿರಲಿಲ್ಲ. ಆದರೆ ಒಂದು ನಾಯಿ ಮಾತ್ರ ಯಾವಾಗಲೂ ಅವನ ಬಳಿ ಇರುತ್ತಿತ್ತು. ಆ ನಾಯಿಯ ಮುಗ್ಧಮುಖ ಋಷಿಗೆ ಅನುಕಂಪ ಹುಟ್ಟಿಸಿತ್ತು.

ಒಮ್ಮೆ ಭಯಾನಕ ಹುಲಿಯೊಂದು ಘರ್ಜನೆಮಾಡುತ್ತ ಬರಲು ನಾಯಿ ಹೆದರಿ ಋಷಿಯಲ್ಲಿ ಮೊರೆಯಿಟ್ಟಿತು. ಶಾಪಾನುಗ್ರಹ ಶಕ್ತನಾದ ಋಷಿ, '' ಹೆದರಬೇಡ ! ನೀನೂ ಹುಲಿಯಾಗು '' ಎಂದ. ನಾಯಿಯೂ ಹುಲಿಯಾಯಿತು.



ಮತ್ತೊಮ್ಮೆ ಬೃಹದಾಕಾರದ ಬಲಿಷ್ಠ ಕಾಡಾನೆಬಂತು. ಈ ಹುಲಿಯಾದ ನಾಯಿ ಋಷಿಯಲ್ಲಿ ಶರಣಾಯಿತು. '' ಅಂಜಬೇಡ, ನೀನೂ ಕಾಡಾನೆಯಾಗು'' - ಎಂದು ಋಷಿ ವರ ನೀಡಿದ. ಹುಲಿಯಾದ ನಾಯಿ ಕಾಡಾನೆಯಾಯಿತು.

ಇನ್ನೊಮ್ಮೆ ದೊಡ್ಡ ಭಯಂಕರ ಸಿಂಹದ ಆಗಮನ. ಯಥಾಪ್ರಕಾರ ಕಾಡಾನೆಯಾದ ನಾಯಿಯ ಮೊರೆ-ಋಷಿಯಲ್ಲಿ. "ನೀನೂ ಸಿಂಹನಾಗು"- ಋಷಿಯ ಅನುಗ್ರಹ. ಇದೂ ಸಿಂಹ.

ಮಗದೊಮ್ಮೆ ಸಿಂಹಕ್ಕಿಂತಲೂ ಪ್ರಬಲವಾದ ಶರಭ ಬಂತು. ಈ ಬಾರಿಯೂ ಋಷಿಯಲ್ಲಿ ಶರಣು. ಸಿಂಹರೂಪ ತಾಳಿದ್ದ ನಾಯಿ ಈಗ ಶರಭ. ಶರಭ ಕಾಡಿಗೆಲ್ಲ ಪ್ರಬಲ ಪ್ರಾಣಿ. ಈ ಶರಭಕ್ಕೆ ತಾನೇ " ವನರಾಜ" ನೆಂಬ ಹಮ್ಮು. ಋಷಿಯನ್ನು ಹೆದರಿಸುವ ಮದ.

" ಬಡ ನಾಯಿಯಾಗಿದ್ದ ನಾನು ಋಷಿಗೆ ಪ್ರಿಯನಾದೆ. ಅದೊಂದು ವಿಧಿಯ ನಂಟು. ಹುಲಿ ಬಂದಾಗ ಹುಲಿಯಾದೆ. ಕಾಡಾನೆ ಆಕ್ರಮಣದ ಸಂದರ್ಭದಲ್ಲಿ ನಾನು ಕಾಡಾನೆಯಾದೆ. ಸಿಂಹ ನುಗ್ಗಿ ಬರಲು ನಾನೂ ಸಿಂಹನಾದೆ. ಶರಭ ದಾಳಿಯಿಡಲು ನಾನೂ ಶರಭನಾದೆ. ಋಷಿಯ ವರದಿಂದ ಬೇಗ ಬೇಗ ಪ್ರಮೋಷನ್ ದೊರೆಯಿತು. ಹೀಗೇ ಮತ್ತೊಮ್ಮೆ ಹಕ್ಕಿ ಮುಂತಾದ ಸಣ್ಣ ಪ್ರಾಣಿಯಿಂದ ಆಪತ್ತು ಬಂದಾಗ " ಹಕ್ಕಿಯಾಗು" ಎಂದು ಈ ಋಷಿ ಗೊಣಗಿದರೆ !! ಅನಾಯಾಸವಾಗಿ ಈ ಶರಭದ ಬಲ ಬಂದಿರುವಾಗ, ವನರಾಜನಾಗಿರುವಾಗ ಹಕ್ಕಿಯಾಗಿಬಿಟ್ಟರೆ? ಆದರೆ ಹಕ್ಕಿ ಆಗುವುದು ಹೇಗೆ? ಋಷಿಯು ಅನುಗ್ರಹಿಸಿದರಲ್ಲವೇ ? ಋಷಿಯನ್ನೇ ಮುಗಿಸಿಬಿಟ್ಟರೆ ? ಇದೇ ಸರಿಯಾದ ಉಪಾಯ ".

ಹೀಗೆ ಬಹುದೂರದ ದುರಾಲೋಚನೆಯನ್ನು ನಡೆಸಿದ ನಾಯಿ ಋಷಿಯ ಮೇಲೆ ಹಾರಿತು !! " ಮೊದಲಿನಂತೆ ನಾಯಿಯೇ ಆಗಿಬಿಡು "- ಋಷಿ ಕೂಡಲೇ ಶಾಪನೀಡಿದ. ಶರಭ ನಾಯಿಯಾಯಿತು. ಋಷಿ ಪಾರಾದ.

ಅಲ್ಪ ಬುದ್ಧಿಯವರಿಗೆ ಎಷ್ಟು ದೊಡ್ಡಸ್ಥಾನ ದೊರೆತರೇನು? ಅವರ ಅಲ್ಪತನ ಬಿಡುವುದಿಲ್ಲ. ಶರಭವಾದ ನಾಯಿ ತನ್ನ ನಾಯಿತನವನ್ನು ಬಿಟ್ಟಿತೇ ? ವ್ಯಕ್ತಿಯನ್ನು ನೋಡುವುದಲ್ಲ. ವ್ಯಕ್ತಿತ್ವವನ್ನು ನೋಡಬೇಕು. ಅಲ್ಪರಿಗೆ ಅಧಿಕಾರ ದೊರೆತರೆ ಅಧಿಕಾರ ಕೊಟ್ಟವರೇ ಅವರ ಕುತಂತ್ರಕ್ಕೆ ಮೊದಲ ಬಲಿ. □

# ಕಣಿಕ ನೀತಿ

ಸ್ವಾರ್ಥ ಪಂಡಿತ ನರಿಯೊಂದು ಕಾಡಲ್ಲಿ ವಾಸ ಮಾಡಿಕೊಂಡಿತ್ತು. ಹುಲಿ, ಇಲಿ, ತೋಳ, ಮುಂಗುಸಿ ಅದರ ಗೆಳೆಯರು. ಬಲಿಷ್ಠವಾದ ಸಿಂಹವೊಂದು ಈ ಗೆಳೆಯರ ಬಳಗದ ಕಣ್ಣಿಗೆ ಬಿತ್ತು. ಈ ಐವರಲ್ಲಿ ಯಾರೂ ಅದನ್ನು ಕೊಲ್ಲುವ ಶಕ್ತಿ ಪಡೆದಿಲ್ಲ. ಅದಕ್ಕಾಗಿ ಎಲ್ಲರೂ ಮಂತ್ರಾಲೋಚನೆ ನಡೆಸಿದವು. ಮೊದಲು ಇಲಿ, ಸಿಂಹದ ಪಾದಗಳನ್ನು ಅದು ಮಲಗಿದ್ದಾಗ ಕಚ್ಚಿಹಾಕಲಿ. ಆನಂತರ ಹುಲಿ ಅದರ ಮೇಲೆ ಹಾರಿ ಸಾಯಿಸಲಿ. ಬಳಿಕ ಎಲ್ಲರೂ ಸೇರಿ ತಿನ್ನುವ- ಎಂದು ಒಪ್ಪಂದವಾಯಿತು. ಅದರಂತೆಯೇ ಸಿಂಹದ ಸಂಹಾರವೂ ಆಯಿತು. '' ಗೆಳೆಯರೇ ! ಸ್ನಾನ ಮಾಡಿಕೊಂಡು ಶುದ್ಧರಾಗಿ ಬನ್ನಿ. ಆಮೇಲೆ ತಿನ್ನೋಣ. ಅಲ್ಲಿಯವರೆಗೆ ನಾನು ಇದನ್ನು ರಕ್ಷಿಸುತ್ತೇನೆ '' ಎಂದು ನರಿಯು ಸಲಹೆಯಿತ್ತಿತು. ಅಂತೆಯೇ ಎಲ್ಲರೂ ಸ್ನಾನಕ್ಕೆ ಹೊರಟರು.



ಸ್ನಾನ ಮುಗಿಸಿ ಮೊದಲು ಹುಲಿ ಬಂತು. ನರಿಯು ಚಿಂತಾಕ್ರಾಂತವಾಗಿ ಕೂತಿತ್ತು. ಹುಲಿ ಕೇಳಿತು - ನರಿರಾಯ ! ಆನಂದದ ಈ ಕ್ಷಣದಲ್ಲಿ ಚಿಂತೆ ಏಕೆ ? ನರಿ ಹೇಳಿತು - ಇಲಿ ಆಡಿದ ಮಾತೊಂದು ನನಗೆ ತುಂಬ ಬೇಸರ ತಂದಿದೆ, ಹುಲಿರಾಯ. ಹುಲಿಯಣ್ಣನ ಬಲಕ್ಕೆ ಧಿಕ್ಕಾರವಿರಲಿ. ನಾನು ಸಿಂಹದ ಪಾದವನ್ನು

ಮೊದಲು ಕಚ್ಚಿಲ್ಲದಿದ್ದರೆ ಈ ರಸಕವಳವೇ ಯಾರಿಗೂ ಸಿಗುತ್ತಿರಲಿಲ್ಲ. ಇದು ನನ್ನ ಹಂಗಿನ ಆಹಾರ-ಎಂದು ಇಲಿ ನುಡಿಯಿತು.

ನರಿಯ ಮಾತು ಕೇಳಿದ ಹುಲಿ – ಇನ್ನೊಬ್ಬರ ಹಂಗಿನ ಮಾಂಸ ನನಗೆ ಬೇಕಿಲ್ಲ. ನನ್ನ ಬಾಹುಬಲದ ಸಂಪಾದನೆಯೇ ನನಗೆ ಆಹಾರ ಇನ್ನು ಮೇಲೆ – ಎಂದು ಹೇಳಿ ಹೊರಟುಹೋಯಿತು.

ಹುಲಿ ಹೋದ ಬಳಿಕ ಇಲಿ ಬಂತು. ಆಗ ನರಿಹೇಳಿತು –" ಈಗ ತಾನೆ ಮುಂಗುಸಿ ಹೇಳಿತು –ಈ ಸಿಂಹದ ಮಾಂಸ ನನಗೆ ರುಚಿಸುತ್ತಿಲ್ಲ. ನಾನು ಇಲಿಯನ್ನೇ ತಿನ್ನುತ್ತೇನೆ ". ಇದನ್ನು ಕೇಳಿದ ಇಲಿಯು ಗಾಬರಿಯಾಗಿ ಓಡಿ ಹೋಯಿತು.

ಅಷ್ಟರಲ್ಲಿ ತೋಳವು ಬಂತು. " ತೋಳಣ್ಣ ! ಹುಲಿಯು, " ಈ ಮಾಂಸವನ್ನು ಯಾರೂ ಮುಟ್ಟಕೂಡದು. ನನ್ನ ಪರಿವಾರವನ್ನೆಲ್ಲಾ ಕರೆದು ತರುತ್ತೇನೆ – ಎಂದು ಅಬ್ಬರಿಸಿ ಹೋಗಿದೆ. ಧೈರ್ಯವಿದ್ದರೆ ಅಲ್ಲಿಯವರೆಗೆ ಕಾಯು " ಎಂದು ನರಿಯು ಹೇಳಿತು. ಗಾಬರಿಗೊಂಡ ತೋಳ ಬಾಲ ಮುದುರಿಕೊಂಡು ಕಣ್ಮರೆಯಾಯಿತು.

ಬಳಿಕ ತನ್ನೆಡೆಗೆ ಬಂದ ಮುಂಗುಸಿಗೆ ನರಿ ಹೇಳಿತು – " ಹುಲಿ, ತೋಳಗಳನ್ನೆಲ್ಲ ಬಡಿದೋಡಿಸಿದ್ದೇನೆ. ನನ್ನೊಡನೆ ಕಾದು ಈ ಮಾಂಸವನ್ನು ತಿನ್ನಬಹುದು." ಹುಲಿ ತೋಳಗಳೊಡನೆ ಕಾದಾಡಿರುವ ನಿನ್ನೊಂದಿಗೆ ಹೋರಾಡುವುದು ನನ್ನಿಂದ ಹೇಗೆ ಸಾಧ್ಯ? ಎಂದು ಅಂದುಕೊಂಡು ಮುಂಗುಸಿಯೂ ಹೆದರಿ ಓಡಿತು.

ಹೀಗೆ ನರಿಯು ತನಗಿಂತ ಬಲಿಷ್ಠವಾದ ಹುಲಿಯನ್ನು ಸಾಮೋಪಾಯದಿಂದ, ಇಲಿ ತೋಳಗಳನ್ನು, ಮುಂಗುಸಿಯನ್ನು ಹುಲಿಯ ಬೆದರಿಕೆಯಿಂದ, ಮುಂಗುಸಿಯನ್ನು ತನ್ನ ಸಾಮರ್ಥ್ಯದಿಂದ ವಂಚಿಸಿ ತಾನೇ ಎಲ್ಲ ಮಾಂಸವನ್ನು ತಿಂದು ಹಾಕಿತು. ರಾಜಕಾರಣಿಯು ಇದರಂತೆ ಅಂಜುಬುರುಕರನ್ನು ಹೆದರಿಸಿ, ಶೂರರನ್ನು ವಿನಯದಿಂದ, ಲೋಭಿಯನ್ನು ಹಣನೀಡಿ, ಸಮ ಅಥವಾ ತನಗಿಂತ ಕೆಳಗಿನವನನ್ನು ಸ್ವಸಾಮರ್ಥ್ಯದಿಂದ ವಂಚಿಸಿ ತಾನೊಬ್ಬ ಸುಖವಾಗಿ ಯಾವಾಗಲೂ

ಸ್ವಾರ್ಥಪರನಾಗಿ ಯಶಸ್ವಿಯಾಗಬೇಕು. ಪುತ್ರ, ಗೆಳೆಯ, ಸಹೋದರ, ತಂದೆ ಅಥವಾ ಗುರು ಯಾರಾದರೇನು ? ಶತ್ರು ಸ್ಥಾನದಲ್ಲಿರುವ ಯಾರನ್ನೂ ಕೊಲ್ಲಲೇಬೇಕು. ಸಂಪತ್ತು ನೀಡುವ ಆಮಿಷ ತೋರಿ ಅಥವಾ ಮೋಸದಿಂದ, ಅಥವಾ ವಿಷ ಹಾಕಿದರೂ ಚಿಂತೆಯಿಲ್ಲ. ಸಂಪತ್ತಿಗಾಗಿ ಯಾರನ್ನೂ ಕೊಲ್ಲಬಹುದು. ಮನಸ್ಸಿನಲ್ಲಿ ದ್ವೇಷ ಬಂದರೂ, ರೋಷ ಉಕ್ಕಿದರೂ ನಗುಮುಖವನ್ನು ತೋರಬೇಕು. ಹೊಡೆಯುತ್ತಲೆ ಪ್ರಿಯವಾಗಿ ಮಾತಾಡುತ್ತಿರಬೇಕು. ಹೊಡೆದು ಅನುಕಂಪ ತೋರಿಸಬೇಕು. ವಿಷಾದವನ್ನು ವ್ಯಕ್ತಪಡಿಸಬೇಕು. ಅಳಬೇಕು ಕೂಡ. ಮಾತಿನಲ್ಲಿ ನಯ ವಿನಯಗಳು ಇರಬೇಕು. ಒಳಗೆ ಕ್ರೂರತೆಯಿರಬೇಕು. ಸಮಯ ಬಂದಾಗ ಶಿರಬಾಗಿ ಕಾಲುಮುಟ್ಟಬೇಕು. ಮನಸ್ಸಿನ ದಾರುಣತೆ ಪ್ರವೃತ್ತಿಯಲ್ಲಿ ಕಾಣದ ಹಾಗಿರಬೇಕು. ದೇವರಲ್ಲಿ ಧರ್ಮದಲ್ಲಿ ಭಾರಿ ವಿಶ್ವಾಸ ತೋರಿಸುತ್ತಿರಬೇಕು. ಒಳಗೆ ದೇವರು, ಧರ್ಮಗಳ ಭೀತಿ ಇರಬಾರದು. ಅದೆಲ್ಲ ಸಂಪಾದನೆಗೆ ತೊಡಕು. ನಾವು ಫಾಸಿಗೊಳ್ಳದೆ ಇನ್ನೊಬ್ಬರನ್ನು ಹೊಂಚು ಹಾಕಿ ಫಾಸಿ ಗೊಳಿಸುತ್ತಿರಬೇಕು.

ಈ ಮಾತುಗಳನ್ನೆಲ್ಲ ಕೇಳುತ್ತಿದ್ದರೆ ಇಂದಿನ ರಾಜಕಾರಣಿಗಳು ನೆನಪಿಗೆ ಬರುವರಲ್ಲವೇ? ಹೌದು,ಇದು ಈ ಸ್ವಾರ್ಥಿ ರಾಜಕಾರಣಿಗಳ ಮೂಲಾಚಾರ್ಯ ನಾದ ದುರ್ಯೋಧನನಿಗೆ ಜನ್ಮವಿತ್ತ ಧೃತರಾಷ್ಟ್ರನಿಗೆ ಕಣಿಕನೆಂಬುವನು ಉಪದೇಶ ನೀಡಿದ ನೀತಿ. ಮಹಾಭಾರತದಲ್ಲಿ ಧರ್ಮಪರನಾದ ರಾಜಕಾರಣಿಗೆ ವಿದುರ ನೀತಿ, ಸ್ವಾರ್ಥಪರನಾದ ಪರಲೋಕ ಭಯವಿಲ್ಲದ ರಾಜಕಾರಣಿಗೆ ಕಣಿಕನೀತಿ. ಹೀಗೆ ಎರಡು ಬಗೆಯ ನೀತಿಗಳ ಉಪದೇಶವಿದೆ. ನಾವು ಏನಾಗಬೇಕು ? ಏನಾಗಬಾರದು? ಎನ್ನುವುದನ್ನು ನಿರ್ಧರಿಸಬೇಕು.

I I I

# ಪುತ್ರವಾತ್ಸಲ್ಯ

ಗೋಮಾತೆ ಎನಿಸಿದ ಸುರಭಿಯು ಒಮ್ಮೆ ದೇವಲೋಕಕ್ಕೆ ಹೋಗಿ ಇಂದ್ರನ ಮುಂದೆ ಅಳುತ್ತಾ ನಿಂತಿತು. ಇದನ್ನು ನೋಡಿ ದೇವೇಂದ್ರನಿಗೆ ಅನುಕಂಪ ಹುಟ್ಟಿತು. " ಸುರಭಿ ! ಏತಕ್ಕೆ ಈ ರೋದನ? ಎಲ್ಲರೂ ಕ್ಷೇಮವಷ್ಟೆ" ಇಂದ್ರನ ಪ್ರಶ್ನೆಗೆ ಸುರಭಿ ಹೇಳಿತು - ನೋಡು ಈ ನನ್ನ ಪುತ್ರನನ್ನು ಕೃಷಿಕ ನೇಗಿಲು ಕಟ್ಟಿ ಚಾಟಿಯಿಂದ ಹೊಡೆಯುತ್ತಿದ್ದಾನೆ. ಕೃಶನಾದ ನನ್ನ ಮಗ ಕೃಷಿಕನ ಹಿಂಸೆಗೆ ನರಳುತ್ತಿರುವುದನ್ನು ನೋಡಲಾರೆ.



ಇಂದ್ರನಿಗೆ ವಿಷಾದದ ಜೊತೆಗೆ ಆಶ್ಚರ್ಯ ಕೂಡ ಆಯಿತು. ಅಮ್ಮ ಸುರಭಿ ! ಸಾವಿರಾರು ಮಕ್ಕಳು ನಿನಗೆ. ಅವರಲ್ಲಿ ಎಷ್ಟೋ ಮಂದಿ ಬೇಸಾಯಗಾರರ ದಂಡನೆಯನ್ನು ಅನುಭವಿಸುತ್ತಿದ್ದಾರೆ. ಈ ಪುತ್ರನಲ್ಲಿಯೇ ಏಕೆ ಇಷ್ಟು ವಾತ್ಸಲ್ಯ?

ಹೌದು ನನಗೆ ಸಾವಿರಾರು ಮಕ್ಕಳು. ಎಲ್ಲರೂ ನನಗೆ ಸಮಾನರೇ. ಆದರೆ ಮಾತೆಗೆ ತನ್ನ ಮಕ್ಕಳಲ್ಲಿ ವಾತ್ಸಲ್ಯ ವಿರುತ್ತದೆಯಾದರೂ ದೀನರಾದ ಮಕ್ಕಳಲ್ಲಿ ವಿಶೇಷವಾಗಿ ಕೃಪೆಯಿರುತ್ತದೆ. ನನಗೂ ಅಷ್ಟೆ. ಈ ಪುತ್ರ ದೀನ, ಕೃಶ. ಆದುದರಿಂದ ಇವನಲ್ಲಿ ವಿಶೇಷ ಮಮತೆ. ಎಂದು ಅರುಹಿದಳು ಸುರಭಿ. ದೇವೇಂದ್ರ ವಿಪರೀತ ಮಳೆ ಸುರಿಸಿ ಕೃಷಿಕನಿಗೆ ನೇಗಿಲು ಉಳಲು ಆಗದೆ ಹಿಂತಿರುಗುವಂತೆ ಮಾಡಿದನು. ಸುರಭಿಯ ಮಗನಿಗೆ ದಂಡನೆಯಿಂದ ಮೋಚನೆ ದೊರೆತಿತು.

ಧೃತರಾಷ್ಟ್ರ !ನನಗೆ, ನೀನು , ಪಾಂಡು, ವಿದುರ ಎಲ್ಲ ಸಮಾನರೇ. ನಿಮ್ಮೆಲ್ಲರ ಮಕ್ಕಳೂ ನನಗೆ ಪ್ರೀತಿಪಾತ್ರರೇ. ಆದರೆ ನಿನ್ನ ನೂರೊಂದು ಮಕ್ಕಳಿಗಿಂತಲೂ ಪಾಂಡುವಿನ ಐದು ಮಕ್ಕಳು ಅನ್ಯಾಯ, ಅಧರ್ಮಕ್ಕೆ ಹೆದರುವವರು. ಅನೇಕ ಕಷ್ಟಗಳನ್ನು ಅನುಭವಿಸಿರುವರು. ಆದುದರಿಂದ ಅವರ ಮೇಲೆ ನನಗೆ ವಿಶೇಷ ವಾತ್ಸಲ್ಯ. ಧೃತರಾಷ್ಟ್ರ ! ನಿನ್ನ ಮಗನಾದ ದುರ್ಯೋಧನ ಧಾರ್ಮಿಕರಾದ ಆ ಪಾಂಡವರೊಡನೆ ಶಾಂತಿಯಿಂದ ಇರಲಿ. ಇಲ್ಲದಿದ್ದರೆ ನಿನ್ನ ಮಕ್ಕಳಿಗೂ ಬದುಕು ಬಹಳ ಕಷ್ಟ - ಪಾಂಡವರು ಅರಣ್ಯವಾಸದಲ್ಲಿದ್ದಾಗ ವ್ಯಾಸರು ಅವರನ್ನು ಕಂಡು ಅನುಗ್ರಹಿಸಿ ಧೃತರಾಷ್ಟ್ರನಲ್ಲಿ ಬಂದು ಮೇಲಿನ ಉಪದೇಶ ನೀಡಿದರು.

★ ★ ★

# ಹುಟ್ಟಿಸಿದವ ಹುಲ್ಲು ಮೇಯಿಸನೆ?

ಇಕ್ಷ್ವಾಕುವಂಶದಲ್ಲಿ ಯುವನಾಶ್ವ ಎಂದೊಬ್ಬ ರಾಜ. ಸಂತಾನವಿಲ್ಲೆಂಬ ಚಿಂತೆ ಅವನಿಗೆ. ಅದೇ ಬೇಸರದಿಂದ ಮಂತ್ರಿಗಳಲ್ಲಿ ರಾಜ್ಯವನ್ನಿಟ್ಟು ಕಾಡಿಗೆ ಹೋದನು. ಒಮ್ಮೆ ತುಂಬ ಬಾಯಾರಿದ. ನೀರಿಗಾಗಿ ಭಾರ್ಗವರ ಆಶ್ರಮಕ್ಕೆ ಬಂದ.

ಅಂದು ಭಾರ್ಗವರು ಅವನ ಸಂತಾನಕ್ಕಾಗಿ ಇಷ್ಟಿಯೊಂದನ್ನು ನಡೆಸುತ್ತಿದ್ದರು. ಯಜ್ಞವೇದಿಕೆಯಲ್ಲಿ ಮಂತ್ರಿತವಾದ ಜಲದಿಂದ ತುಂಬಿದ ಕಲಶವನ್ನಿರಿಸಿದರು. ಮರುದಿನ ರಾಜಪತ್ನಿಗೆ ಕುಡಿಯಲು ಕೊಡಬೇಕೆಂದು ಸಂಕಲ್ಪಿಸಿದ್ದರು. ಆ ರಾತ್ರಿ ಬಾಯಾರಿ ಬಂದ ಯುವನಾಶ್ವ ನೀರು ಬೇಕೆಂದು ಕೂಗಿದ. ಬಾಯಾರಿ ಗಂಟಲು ಒಣಗಿತ್ತು. ಅವನ ಕೂಗು ಯಾರ ಕಿವಿಗೂ ಬೀಳಲಿಲ್ಲ. ಅವನೆ ಓಡೋಡಿ ಬಂದು ಕಲಶದ ನೀರನ್ನು ಕುಡಿದು ಖಾಲಿ ಮಾಡಿ ದಣಿವಾರಿಸಿಕೊಂಡನು.

ಭಾರ್ಗವರು ಮರುದಿನದ ಮುಂಜಾನೆ ನೋಡುತ್ತಾರೆ – ಕಲಶ ಬರಿದಾಗಿದೆ ! ಗಾಬರಿಯಾದರು. ಆತಂಕಗೊಂಡರು. ತಪಶ್ಶಕ್ತಿ ಮಂತ್ರಶಕ್ತಿಗಳನ್ನೆಲ್ಲ ಧಾರೆಯೆರೆದು ಸಂತಾನಕ್ಕಾಗಿ ರಾಣಿಗೆ ಕೊಡಬಯಸಿದ್ದ ಕೊಡ ಬರಿದು ! ಇದು ಯಾರ ಕೆಲಸ ? ' ಇದು ನನ್ನ ಕೆಲಸ' – ಉತ್ತರಿಸಿದ ಯುವನಾಶ್ವ. ರಾಜನ್ ! ನಿನ್ನ ಹೆಂಡತಿಗಾಗಿ ಮಂತ್ರಿಸಿದ ಜಲವನ್ನು ನೀನು ಕುಡಿದಿರುವಿ. ನಮ್ಮ ಮಂತ್ರ ವ್ಯರ್ಥವಾಗುವ ಹಾಗಿಲ್ಲ. ದೈವಸಂಕಲ್ಪದಂತೆ ನೀನೇ ನಿನ್ನ ಮಗನಿಗೆ ಜನ್ಮ ಕೊಡುವಿ. ಆದರೆ ನಿನಗೆ ಗರ್ಭಧಾರಣೆಯ ದುಃಖವಿಲ್ಲ. ಭಾರ್ಗವರ ಮಾತಿನಂತೆ ನೂರು ವರ್ಷದ ಬಳಿಕ ಯುವನಾಶ್ವನ ಹೊಟ್ಟೆಯ ಎಡ ಭಾಗ ಸೀಳಿಕೊಂಡು ಗಂಡು ಮಗು ಜನ್ಮ ಪಡೆಯಿತು. ಭಾರ್ಗವರ ತಪೋಬಲದಿಂದ ಯುವನಾಶ್ವನಿಗೆ ಮೃತ್ಯು ಬರಲಿಲ್ಲ. ಗಂಡಸು ಹಡೆದ ಈ ಗಂಡು ಮಗುವನ್ನು ನೋಡಲು ಇಂದ್ರಾದಿ ದೇವತೆಗಳೂ ಧಾವಿಸಿ ಬಂದರು. ಕುತೂಹಲದಿಂದ ದೇವತೆಗಳು ದೇವೇಂದ್ರನನ್ನು ಕೇಳಿದರು. ಈ ಮಗುವಿಗೆ ಹಾಲುಣಿಸುವವರು ಯಾರು? 'ನಾನು' ಎಂದ ದೇವೇಂದ್ರ! ತನ್ನ ತರ್ಜನೀ (ತೋರು) ಬೆರಳನ್ನು ಮಗುವಿನ ಬಾಯಿಯಲ್ಲಿರಿಸಿದ. ಬೆರಳು ಚೀಪಿ ಬೆಳೆಯಿತು ಮಗು.

ದೇವತೆಗಳೆಲ್ಲ ಆ ಮಗುವಿಗೆ ಮಾಂಧಾತಾ ಎಂದು ಕರೆದರು. ತಾಯಿಗೆ ಹುಟ್ಟಬೇಕಿದ್ದ ಮಗು ದೈವಲೀಲೆಯಿಂದ ತಂದೆಗೆ ಹುಟ್ಟಿದರೆ ಭಗವಂತನು ಇಂದ್ರನ ಕೈ ಬೆರಳಿನಿಂದಲೆ ಹೊಟ್ಟೆ ತುಂಬಿಸಿ ಬೆಳವಣಿಗೆ ಇತ್ತುದನ್ನು ಕೇಳಿದಾಗ 'ಹುಟ್ಟಿಸಿದವ ಹುಲ್ಲು ಮೇಯಿಸನೆ ' ಎಂಬ ಮಾತು ನೆನಪಾಗುವುದಲ್ಲವೇ ? ಭಗವಂತ ಕಾಪಾಡುವನೆಂಬ ಭರವಸೆ ನೀಡುವ ಈ ಕಥೆ ಎಂಥ ಮಾರ್ಮಿಕ !

■ ■ ■

# ಬ್ರಹ್ಮ ಚರ್ಯ

ಪಾರ್ಥನು, ವಿಶೇಷವಾಗಿ ಅಸ್ತ್ರಶಿಕ್ಷಣವನ್ನು ಪಡೆಯಲು ದೇವಲೋಕಕ್ಕೆ ಹೋಗಿದ್ದನು. ಅಸ್ತ್ರಶಿಕ್ಷಣ ಮುಗಿದ ಬಳಿಕ ಚಿತ್ರಸೇನನೆಂಬ ಗಂಧರ್ವನ ಮೂಲಕ ಅರ್ಜುನನಿಗೆ ಸಂಗೀತ, ನೃತ್ಯ, ಶಿಕ್ಷಣದ ಏರ್ಪಾಡು ನಡೆದಿತ್ತು.



ದೇವಲೋಕದಲ್ಲಿ ಊರ್ವಶಿಯ ನರ್ತನ ಪ್ರಸಿದ್ಧವಷ್ಟೆ! ಒಮ್ಮೆ ಅನೇಕ ಅಪ್ಸರೆಯರು ನರ್ತನ ಮಾಡುತ್ತಿದ್ದರು. ನೋಡುತ್ತಾ ಕುಳಿತ ಅರ್ಜುನ ಊರ್ವಶಿಯನ್ನು ತದೇಕಚಿತ್ತದಿಂದ ಗಮನಿಸುತ್ತಿದ್ದ. ಇದನ್ನು ಇಂದ್ರನೂ ಅವಲೋಕಿಸಿದ್ದನು. ಚಿತ್ರಸೇನನನ್ನು ಕರೆದು , " ಅರ್ಜುನನು ಊರ್ವಶಿಯಲ್ಲಿ ಅನುರಕ್ತನಾಗಿರುವಂತೆ ಕಾಣುತ್ತದೆ. ಊರ್ವಶಿಗೆ ಅರ್ಜುನನನ್ನು ವರಿಸುವಂತೆ ಹೇಳು, ಎಂದನು ದೇವೇಂದ್ರ ಚಿತ್ರಸೇನನಿಗೆ. ಅರ್ಜುನನ ಸೌಂದರ್ಯ, ವೀರತನವನ್ನೆಲ್ಲ ನೋಡಿದ ಊರ್ವಶಿಗೆ ಮೊದಲೆ ಅಂಕುರವಾಗಿದ್ದ ಅನುರಾಗ ಚಿತ್ರಸೇನನು ತಿಳಿಸಿದ ದೇವೇಂದ್ರನ ಸಲಹೆಯನ್ನು ಕೇಳಿ ಮತ್ತಷ್ಟು ಬಲಿತಿತು. ಶೃಂಗಾರವೇ ಮೈ ತಳೆದು ಬಂದಂತೆ ಸಿಂಗರಿಸಿಕೊಂಡು ಈ ಅರಳುಮಲ್ಲಿಗೆ ಅರ್ಜುನನಲ್ಲಿಗೆ ಧಾವಿಸಿ ಬಂದಳು.

" ಬನ್ನಿ ತಾಯಿ ! ಶಿರಬಾಗಿ ನಮಿಸುತ್ತೇನೆ. ನಾನು ನಿಮ್ಮ ದೂತ. ಏನಾಗ ಬೇಕು ? ಅಪ್ಪಣೆ ಮಾಡಿ ". ಅರ್ಜುನನ ಮಾತು ಕೇಳಿ ಶೃಂಗಾರ ಕೇಲಿಗೆಂದು ಬಂದ ವನಿತೆ ಅವನಿಪತಿತೆ ಆದಳು. ಸಾವರಿಸಿಕೊಂಡು, ಬಂದ ಕಾರಣ ವಿವರಿಸಿದಳು. ನರ್ತನ ಸಮಯದಲ್ಲಿ ನೀವು ನನ್ನನ್ನು ಎವೆಯಿಕ್ಕದೆ ನೋಡುತ್ತಿದ್ದುದನ್ನು ಗಮನಿಸಿದ ನಿಮ್ಮ ತಂದೆ ದೇವೇಂದ್ರ ನಿಮ್ಮನ್ನು ವರಿಸುವಂತೆ ಚಿತ್ರಸೇನನ ಮೂಲಕ ಹೇಳಿ ಕಳುಹಿಸಿದರು. ಅದಕ್ಕೆಂದು ಬಂದೆ. ಬಯಕೆ ಬಯಲು ಮಾಡಿದೆ.

ಊರ್ವಶಿಯ ಮನೋರಥ ಕೇಳಿದ ಪಾರ್ಥ, ನನ್ನನ್ನು ಅಪಾರ್ಥ ಮಾಡಿಕೊಳ್ಳದಿರೆಂದು ಬಿನ್ನವಿಸಿದ ಊರ್ವಶಿಯಲ್ಲಿ.

" ಯಥಾ ಕುಂತೀ ಮಹಾಭಾಗಾ ಯಥೇಂದ್ರಾಣೀ ಶಚೀ ಮಮ ।

ತಥಾ ತ್ವಮಪಿ ಕಲ್ಯಾಣೀ ನಾತ್ರ ಕಾರ್ಯಾ ವಿಚಾರಣಾ ॥

ನ ಮಾಮರ್ಹಸಿ ಕಲ್ಯಾಣಿ ಅನ್ಯಥಾ ಧ್ಯಾತುಮಪ್ಸರಾಃ ।

ಗುರೋರ್ಗುರುತರಾ ಮೇ ತ್ವಂ ಮಮ ತ್ವಂ ವಂಶವರ್ಧಿನೀ ॥

ಕುಂತಿ ಹೇಗೋ, ಶಚೀ ಹೇಗೋ, ಹಾಗೆಯೇ ನೀವು ನನಗೆ ಪೂಜ್ಯರು, ಸಂದೇಹವಿಲ್ಲ. ನನ್ನ ವಂಶದ ಹಿರಿಯರಾದ ಪುರು ಮಹಾರಾಜರ ಧರ್ಮಪತ್ನಿಯಾದ ತಾವು ಅತ್ಯಂತ ಹಿರಿಯರು, ಪೂಜ್ಯರು. ಆದುದರಿಂದಲೇ ನಾನು ನಿಮ್ಮನ್ನು ಆಶ್ಚರ್ಯದಿಂದ ನೋಡಿದ್ದು. ಮತ್ತಾವ ಭಾವನೆಯಿಂದಲೂ ಅಲ್ಲ. ಕ್ಷಮಿಸಿ.

" ಪಾರ್ಥ ! ನಿನ್ನ ತಂದೆಯ ಅನುಜ್ಞೆ ಪಡೆದು, ಲಜ್ಜೆ ಸರಿಸಿ ತಾನಾಗಿ ಒಲಿದು ಬಂದ ಕಾಮವಶಳಾದ ನನ್ನನ್ನು ತಿರಸ್ಕರಿಸಿರುವಿ. ನನ್ನ ಕಾಮತೃಷೆಯನ್ನು ತಣಿಸದ ನಿನ್ನ ಪೌರುಷ ನಿನಗೂ ಉಪಯೋಗವಾಗದಿರಲಿ. ನೀನು ಮಾನವರ್ಜಿತನಾಗಿ ಹುಡುಗಿಯರಿಗೆ ನೃತ್ಯ ಕಲಿಸುತ್ತ ನಪುಂಸಕನೆಂದು ಖ್ಯಾತನಾಗು "- ಅರ್ಜುನನನ್ನು ವಶಮಾಡಿಕೊಳ್ಳಲಾಗದ ಊರ್ವಶಿ ಶಾಪವಿತ್ತು, ಬಂದ ದಾರಿಗೆ ಸುಂಕವಿಲ್ಲದೆ ಹಿಂತಿರುಗಿದಳು.

ಈ ಘಟನೆಯಿಂದ ಗಲಿಬಿಲಿಗೊಂಡ ಗಾಂಡೀವಿ ಚಿತ್ರಸೇನನಲ್ಲಿಗೆ ಚಿತ್ತೈಸಿದನು. ನಡೆದುದನ್ನೆಲ್ಲ ಅರುಹಿದನು. ಚಿತ್ರಸೇನ ದೇವೇಂದ್ರನಿಗೆ ತಿಳಿಸಿದನು. ಎಲ್ಲರೂ ಬಯಸುವ ಊರ್ವಶಿ ತಾನಾಗಿ ಬಂದಾಗಲೂ ಕಾಮವಶನಾಗದೆ ಹಿರಿತನದ ಗೌರವ ತೋರಿಸಿದ, ಗೃಹಸ್ಥನಾಗಿಯೂ ಬ್ರಹ್ಮಚಾರಿಯಾಗಿರುವ ಅರ್ಜುನನನ್ನು ಕಂಡು ದೇವೇಂದ್ರನಿಗೆ ಸಂತಸವಾಯಿತು. ಅರ್ಜುನ ! ನಿನ್ನಂಥ ಸತ್ಪುತ್ರನನ್ನು ಪಡೆದ ಪೃಥೆ ಧನ್ಯಳು. ಊರ್ವಶಿ ನಿನಗಿತ್ತಿರುವ ಶಾಪ ನಿನ್ನ ಪಾಲಿಗೆ ವರವಾಗಿ ಪರಿಣಮಿಸುತ್ತದೆ. ಮುಂದೆ ಹದಿಮೂರನೇ ವರ್ಷದ ಅಜ್ಞಾತವಾಸದ ಸಮಯದಲ್ಲಿ ನೃತ್ಯಕಲಿಸುವ ನಪುಂಸಕನಾಗಿ ಯಾರಿಗೂ ತಿಳಿಯದೆ ವಾಸಿಸಲು ಅನುವಾಗುತ್ತದೆ. ದೇವೇಂದ್ರನು ಸಂತೈಸಿದನು. ಅರ್ಜುನನಿಗೂ ಸಮಾಧಾನವಾಯಿತು.

ಈ ಕಥೆಯನ್ನು ಓದುವವರಿಗೂ ಸಚ್ಚಾರಿತ್ರ್ಯ ಬರಲಿ ಎಂದು ಇಂದ್ರ ಹರಸಿದನು.

I I I

# ನಿರಪರಾಧಿಯ ಶಿಕ್ಷೆಗಾಗಿ ಪ್ರಾಯಶ್ಚಿತ್ತ

ಜನಮೇಜಯನು ಒಮ್ಮೆ ದೀರ್ಘಸತ್ರವನ್ನು ಆರಂಭಿಸಿದನು. ಅವನಿಗೆ ಮೂವರು ಸಹೋದರರು - ಶ್ರುತಸೇನ, ಉಗ್ರಸೇನ, ಭೀಮಸೇನ. ಅವರು ಸತ್ರ ನಡೆಸುತ್ತಿರುವಲ್ಲಿಗೆ ನಾಯಿಯೊಂದು ಬಂತು. ಜನಮೇಜಯನ ಸಹೋದರರು ಅದನ್ನು ಚೆನ್ನಾಗಿ ಹೊಡೆದರು. ಪೆಟ್ಟುತಿಂದ ನಾಯಿ ಜೋರಾಗಿ ಅಳುತ್ತಾ ತಾಯಿಯ ಬಳಿಗೆ ಓಡಿತು. '' ಏತಕ್ಕಾಗಿ ಅಳುತ್ತಿರುವೆ ? ಯಾರು ಹೊಡೆದರು ?'' 'ಸರಮಾ' ಎಂಬ ಹೆಸರಿನ ಆ ತಾಯಿನಾಯಿ ಕೇಳಿತು. ' ಜನಮೇಜಯನ ಸಹೋದರ' ಮರಿನಾಯಿ ಉತ್ತರಿಸಿತು. ''ನೀನೇನೋ ಅಪರಾಧ ಮಾಡಿರಬೇಕು'' ತಾಯಿ



ಶಂಕಿಸಿದಳು. '' ಇಲ್ಲ, ಹೋಮದ್ರವ್ಯವನ್ನು ನೋಡಲಿಲ್ಲ, ಮೂಸಲಿಲ್ಲ '' ಮಗು ಉತ್ತರಿಸಿತು. ಸಿಟ್ಟುಗೊಂಡ ಆ ಸರಮಾ ನೇರವಾಗಿ ಸತ್ರವೇದಿಗೆ ಬಂದು ಕೇಳಿತು - '' ನನ್ನ ಮಗು ನಿಮ್ಮ ಯಾವ ಹವಿಸ್ಸನ್ನೂ ಮೂಸಿ ನೋಡಿಲ್ಲ. ಏಕೆ ಹೊಡೆದಿರಿ ?'' ಜನಮೇಜಯನ ಸಹೋದರರು ಉತ್ತರಿಸಲಿಲ್ಲ. ಕುಪಿತವಾದ ನಾಯಿ ಶಾಪ ಕೊಟ್ಟಿತು - '' ನಿರಪರಾಧಿಯಾದ ನನ್ನ ಮಗುವಿಗೆ ತೊಂದರೆ ಕೊಟ್ಟದುದಕ್ಕೆ ನಿನಗೆ ಆಕಸ್ಮಿಕವಾದ ಭಯವುಂಟಾಗುವುದು''. ಇದರಿಂದ ಕಳವಳಗೊಂಡ ಜನಮೇಜಯನು ಸತ್ರಮುಗಿದ ಮೇಲೆ ಈ ಶಾಪದ ಉಪಶಮನಕ್ಕಾಗಿ ಯೋಗ್ಯ ಪುರೋಹಿತರನ್ನು

ಹುಡುಕಲು ಹಸ್ತಿನಾಪುರಕ್ಕೆ ಹೋದನು. ಒಂದೊಮ್ಮೆ ಬೇಟೆಗಾಗಿ ಹೊರಟ ಜನಮೇಜಯ ಒಬ್ಬ ಋಷಿಗಳ ಆಶ್ರಮವನ್ನು ಕಂಡ ."ಶ್ರುತಶ್ರವ" ಎಂಬ ಋಷಿಗಳು ಅಲ್ಲಿದ್ದರು. "ಸೋಮಶ್ರವ " ಎಂದು ಅವರ ಪುತ್ರ. ಶ್ರುತಶ್ರವರಲ್ಲಿ ಜನಮೇಜಯ ತನ್ನ ಅಳಲನ್ನು ನಿವೇದಿಸಿಕೊಂಡು ನಿಮ್ಮ ಮಗನನ್ನು ಪುರೋಹಿತರನ್ನಾಗಿ ಕಳುಹಿಸಿಕೊಡಬೇಕೆಂದನು. ಸರ್ಪಜಾತಿಯ ಹೆಣ್ಣಿನಲ್ಲಿ ಹುಟ್ಟಿದ ಸೋಮಶ್ರವನೆಂದ "ಈ ನನ್ನ ಪುತ್ರ ಶಾಸ್ತ್ರಾಧ್ಯಯನ ಸಂಪನ್ನ. ನಿನ್ನ ಪಾಪಕೃತ್ಯವನ್ನು ಪರಿಹರಿಸಲು ಸಮರ್ಥ. ಇವನನ್ನು ನೀನು ಕರೆದುಕೊಂಡು ಹೋಗಬಹುದು. ಆದರೆ ಅವನದೊಂದು ವ್ರತವಿದೆ - ಯಾರಾದರೂ ಬ್ರಾಹ್ಮಣರು ನನ್ನ ಮಗನಲ್ಲಿ ಏನಾದರೂ ಕೇಳಿದರೆ ಅದನ್ನು ಇವನು ಕೊಡಬೇಕು." ಶ್ರುತಶ್ರವರ ಕರಾರಿಗೆ ಒಪ್ಪಿ ಸೋಮಶ್ರವರನ್ನು ಕರೆದುಕೊಂಡು ಜನಮೇಜಯನು ಹಿಂತಿರುಗಿದನು. ತನ್ನ ಸಹೋದರರಿಗೂ ಸೋಮಶ್ರವರ ವ್ರತದ ವಿಷಯವನ್ನು ತಿಳಿಸಿದನು. " ಸೋಮಶ್ರವ" ರಿಂದ ಶಾಂತಿಕಾರ್ಯವನ್ನು ಮಾಡಿಸಿದನು.

ನಿರಪರಾಧಿಯಾದ ಒಂದು ನಾಯಿಗೆ ಹೊಡೆದದ್ದಕ್ಕೆ ಜನಮೇಜಯನು ಪುರೋಹಿತರನ್ನು ಹುಡುಕಿ ಶಾಂತಿ ಮಾಡಿಸಿಕೊಳ್ಳಬೇಕಾಯಿತು. ಶಾಂತಿ ಮಾಡಿಕೊಳ್ಳದೆ ಪ್ರತಿನಿತ್ಯ ನಿರಪರಾಧಿಗಳಾದ ಪಶು, ಪಕ್ಷಿ, ಕ್ರಿಮಿ, ಕೀಟ, ಮನುಷ್ಯರುಗಳಿಗೆ ತೊಂದರೆ ಕೊಡುವ ನಮಗೇನು ಗತಿ ?



# ಗುರು ಶುಶ್ರೂಷೆ

ಒಂದು ತಪೋವನ. ಅಲ್ಲೊಬ್ಬ ಮಹರ್ಷಿ. ಹೆಸರು - 'ಧೌಮ್ಯ'. ನೀರೇ ಅವರ ಆಹಾರ. ಅವರಿಗೆ ಮೂವರು ಶಿಷ್ಯರು - ಉಪಮನ್ಯು, ಆರುಣಿ, ವೇದ.

ಒಮ್ಮೆ ಧೌಮ್ಯರು ಆರುಣಿಯನ್ನು - '' ಗದ್ದೆಯ ಒಡ್ಡನ್ನು ಕಟ್ಟಿ ನೀರು ನಿಲ್ಲಿಸು'' ಎಂದು ಆಜ್ಞಾಪಿಸಿದರು. ಗುರುಗಳ ಆಜ್ಞೆಯನ್ನು ಶಿರಸಾ ವಹಿಸಿ ಗದ್ದೆಗೆ ಆರುಣಿ ಹೋದನು. ಆದರೆ ಗದ್ದೆಯ ಒಡ್ಡು ಹರಿದು ಹೋಗುತ್ತಿರುವ ನೀರನ್ನು ಅವನಿಂದ ತಡೆಯಲಾಗಲಿಲ್ಲ. ಯೋಚನೆಮಾಡಿ ಆರುಣಿಯೇ ನೀರಿಗೆ ಅಡ್ಡವಾಗಿ ಮಲಗಿಬಿಟ್ಟ. ಆರುಣಿ ಕಾಣದಿದ್ದುದನ್ನು ನೋಡಿ ಧೌಮ್ಯರು ಉಳಿದವರಲ್ಲಿ ಆರುಣಿ ಎಲ್ಲೆಂದು ಕೇಳಿದರು. '' ನೀವೇ ಕಳುಹಿಸಿದರಲ್ಲ ಗುರುಗಳೇ ! ಪಾಂಚಾಲ ದೇಶಕ್ಕೆ. ಗದ್ದೆಯ ಒಡ್ಡನ್ನು ಬಂಧಿಸಲು ''- ಶಿಷ್ಯರು ಉತ್ತರಿಸಿದರು. ' ಎಲ್ಲ ಬನ್ನಿ. ಹೋಗಿ ನೋಡೋಣ ' ಧೌಮ್ಯರು ಶಿಷ್ಯರನ್ನೆಲ್ಲ ಕರೆದುಕೊಂಡು ಗದ್ದೆಯ ಸಮೀಪಕ್ಕೆ ಹೋದರು. ಎಲ್ಲೂ ಆರುಣಿ ಕಾಣಲಿಲ್ಲ. '' ಮಗು ಆರುಣಿ ಎಲ್ಲಿರುವೆ ಬಾ'' ಎಂದು ಕೂಗಿದರು. ಗದ್ದೆಯ ಒಡ್ಡಿಗೆ ಮೈಯೊಡ್ಡಿದ್ದ ಆರುಣಿ ಓಡಿ ಬಂದು



ಕೈಮುಗಿದ. ಗುರುಗಳೇ ! ನಿಮ್ಮ ಅಣತಿಯಂತೆ ಗದ್ದೆಯ ನೀರನ್ನು ತಡೆಯಲು ಹೋದೆ. ನೀರು ತಡೆಯಲಾರದೆ ನಾನೇ ಮಲಗಿದ್ದೆ. ನಿಮ್ಮ ಧ್ವನಿ ಕೇಳಿ ಎದ್ದು ಬಂದೆ- ಉತ್ತರಿಸಿದನು. ಧೌಮ್ಯರಿಗೆ ಶಿಷ್ಯನ ಶ್ರದ್ಧೆಯನ್ನು ನೋಡಿ ಕರುಣೆ ಉಕ್ಕಿತು. ಗುರು ಆಜ್ಞೆಯನ್ನು ಅನುಸರಿಸಲು ಗದ್ದೆಯಲ್ಲಿ ನೀರಿಗೆ ಅಡ್ಡವಾಗಿ

ಮಲಗಿ ನಾ ಕರೆದಾಗ ಓಡಿ ಬಂದ ನಿನಗೆ ಮುಂದೆ ಉದ್ದಾಲಕ ಎಂದೇ ಪ್ರಸಿದ್ಧಿ ಬರುತ್ತದೆ. ನನ್ನ ಮಾತನ್ನು ಶ್ರದ್ಧೆಯಿಂದ ಪಾಲಿಸಿದ್ದರಿಂದ ನಿನಗೆ ಶ್ರೇಯಸ್ಸಾಗುವುದು. ಎಲ್ಲ ವೇದಗಳು, ಧರ್ಮಶಾಸ್ತ್ರಗಳೂ ನಿನಗೆ ಹೊಳೆಯುತ್ತವೆ - ಎಂದು ಧೌಮ್ಯರು ಆರುಣಿಯನ್ನು ಹರಸಿದರು.

ಧೌಮ್ಯರ ಮತ್ತೊಬ್ಬ ಶಿಷ್ಯ ಉಪಮನ್ಯು. ಅವನದ್ದು ಇನ್ನೊಂದು ಕಥೆ. ಧೌಮ್ಯರು ಒಮ್ಮೆ ಉಪಮನ್ಯುವಿಗೆ " ಗೋವುಗಳನ್ನು ರಕ್ಷಣೆ ಮಾಡು " ಎಂದು ಅಪ್ಪಣೆಯಿತ್ತರು. ಸಂಜೆಯವರೆಗೆ ಗೋಪಾಲನೆ ಮಾಡಿ ಗುರುಗಳ ಮುಂದೆ ನಮಸ್ಕರಿಸಿದನು. ಪುಷ್ಟಕಾಯನಾದ ಶಿಷ್ಯನನ್ನು ಗಮನಿಸಿದ ಧೌಮ್ಯರು ಕೇಳಿದರು - ' ನಿನ್ನ ಆಹಾರದ ವ್ಯವಸ್ಥೆ ಏನು ?' 'ಭಿಕ್ಷೆ ಬೇಡಿ ಜೀವನ ನಡೆಸುತ್ತಿದ್ದೇನೆ' ಎಂದನು. ನನಗೆ ನಿವೇದಿಸದೆ ಭೈಕ್ಷಾನ್ನವನ್ನು ಉಪಯೋಗಿಸಬಾರದೆಂದರು. ಹಾಗೇ ಆಗಲೆಂದು ಭಿಕ್ಷೆ ಬೇಡಿ ಗುರುಗಳ ಮುಂದಿಟ್ಟನು. ಉಪಮನ್ಯು ತಂದಿತ್ತ ಭಿಕ್ಷಾನವನ್ನು ಸ್ವಲ್ಪವೂ ಉಳಿಸದೆ ಧೌಮ್ಯರು ಸ್ವೀಕರಿಸಿದರು. ಆದರಿಂದ ಕಸಿವಿಸಿಗೊಳ್ಳದ ಉಪಮನ್ಯು ಮರುದಿನ ಸಂಜೆ ಪುನಃ ಗೋಪಾಲನೆ ಮುಗಿಸಿ ಕೈ ಮುಗಿದ. ಪುನಃ ಪ್ರಸನ್ನನೇ ಆಗಿದ ಉಪಮನ್ಯುವನ್ನು ಧೌಮ್ಯರು ಮತ್ತೆ ಕೇಳಿದರು



- 'ನೀನು ತಂದಿದ್ದ ಭಿಕ್ಷಾನ್ನವನ್ನು ಪೂರ್ತಿ ನಾನೇ ತೆಗೆದುಕೊಂಡಿದ್ದೆ. ಈಗ ಆಹಾರಕ್ಕೆ ಏನು ಏರ್ಪಾಡು ಆಗಿದೆ ?' ನಿಮಗೆ ಭಿಕ್ಷಾನ್ನ ನಿವೇದಿಸಿದ ಮೇಲೆ ಮತ್ತೊಮ್ಮೆ ಭಿಕ್ಷೆಬೇಡುತ್ತೇನೆಂದ ಉಪಮನ್ಯು. 'ಇದು ತಪ್ಪು, ಎರಡು ಬಾರಿ

ನೀನೊಬ್ಬನೇ ಭಿಕ್ಷೆ ಬೇಡುವುದರಿಂದ ಉಳಿದವರಿಗೆ ಭಿಕ್ಷೆ ಇಲ್ಲದಂತಾದರೆ ? ನೀನು ಲೋಭಿಯಾಗುವಿ '-ಗುರುಗಳು ಅದನ್ನೂ ನಿಷೇಧಿಸಿದರು. ಪುನಃ ಗೋಪಾಲನೆ ಮುಗಿಸಿ ಬಂದ ಶಿಷ್ಯನನ್ನು ಕೇಳಿದರು – ಈಗ ಏನು ಆಹಾರ ? " ಈ ಗೋವುಗಳ ಹಾಲು " ಶಿಷ್ಯ ಉತ್ತರಿಸಿದ. 'ಛೆ ಇದು ಅನ್ಯಾಯ. ನನ್ನ ಅಪ್ಪಣೆ ಇಲ್ಲದೆ ಹಾಲು ಕುಡಿಯುವುದೇ ?' - ಗುರುಗಳು ಮತ್ತೆ ಬಿಗಿಯಾದರು. ಹಾಗೇ ಆಗಲಿ ಎಂದು ತೆರಳಿದ ಉಪಮನ್ಯು. ಮರುದಿನ ಪುನಃ ಧೌಮ್ಯರಿಂದ ಅದೇ ಪ್ರಶ್ನೆ. ಉಪಮನ್ಯು ಹೇಳಿದ – " ಕರುಗಳು ಹಾಲುಕುಡಿಯುವಾಗ ಅದರ ಬಾಯಿಯಿಂದ ಸುರಿವ ನೊರೆ ಕುಡಿಯುತ್ತೇನೆ." " ನಿನ್ನ ಮೇಲಿನ ಅನುಕಂಪದಿಂದ ಈ ಕರುಗಳು ಹೆಚ್ಚು ನೊರೆ ಸುರಿಸುತ್ತವೆ. ಆದುದರಿಂದ ಅದನ್ನು ಕುಡಿಯುವುದೂ ಇನ್ನೊಬ್ಬರ ವೃತ್ತಿಗೆ ಉಪರೋಧ ಒಡ್ಡಿದಂತೆಯೇ " - ಗುರುಗಳು ಅದನ್ನೂ ತಡೆದರು. ಮತ್ತೆ ದನ ಮೇಯಿಸಲು ಕಾಡಿಗೆ ಹೋದ ಉಪಮನ್ಯು ಹಸಿವೆ ತಡೆಯಲಾರದೆ ಎಕ್ಕದೆಲೆಗಳನ್ನು ತಿಂದ . ಅದರಿಂದಾಗಿ ಕುರುಡನಾದ. ಹಾಗೆಯೇ ನಡೆದು ಬಂದು ಬಾವಿಗೆ ಬಿದ್ದ. ಸಂಜೆ ಕತ್ತಲು ಕವಿದರೂ ಉಪಮನ್ಯು ಬಾರದಿದ್ದುದನ್ನು ಕಂಡ ಧೌಮ್ಯರು ಶಿಷ್ಯರನ್ನು " ಉಪಮನ್ಯು ಎಲ್ಲಿ " ಕೇಳಿದರು. ' ಗೋರಕ್ಷಣೆಗಾಗಿ ಕಾಡಿಗೆ ಹೋಗಿದ್ದಾನೆ '. ಎಂದುತ್ತರಿಸಿದರು "ಉಪಮನ್ಯುವಿನ ಎಲ್ಲ ಆಹಾರದ ವ್ಯವಸ್ಥೆಗಳನ್ನು ನಾನು ತಡೆದೆ. ಅದರಿಂದ ಕೋಪ ಬಂದು ಅಲ್ಲೇ ಉಳಿದಿರಬಹುದು. ಬನ್ನಿ ಹುಡುಕೋಣ " ಎಂದು ಶಿಷ್ಯರೊಂದಿಗೆ ಧೌಮ್ಯರು ಕಾಡಿಗೆ ಹೋದರು. " ಉಪಮನ್ಯೋ, ವತ್ಸ ಬಾ " ಎಂದರು. " ಅರ್ಕಪತ್ರಗಳನ್ನು ತಿಂದು ಕುರುಡಾಗಿ ಬಾವಿಯಲ್ಲಿದ್ದೇನೆ" ಎಂದು ಉಪಮನ್ಯು ಗಟ್ಟಿಯಾಗಿ ಉತ್ತರಿಸಿದ. " ಅಶ್ವಿನೀ ದೇವತೆಗಳನ್ನು ಸ್ತೋತ್ರ ಮಾಡು. ದೇವವೈದ್ಯರಾದ ಅವರೇ ನಿನಗೆ ದೃಷ್ಟಿಕೊಡುತ್ತಾರೆಂದು ಧೌಮ್ಯರು ಸಲಹೆಯಿತ್ತರು. ಗುರುಗಳ ಮಾತಿನಂತೆ ಉಪಮನ್ಯು ಅಶ್ವಿನೀದೇವತೆಗಳನ್ನು ಸ್ತೋತ್ರ ಮಾಡಿದನು. ಪ್ರಸನ್ನರಾದ ಅಶ್ವಿನೀದೇವತೆಗಳು ಅಪೂಪವನ್ನು ಕೊಟ್ಟು, " ಇದನ್ನು ತಿನ್ನು " ಎಂದರು. ಉಪಮನ್ಯು ಒಪ್ಪಲಿಲ್ಲ. "ಗುರುಗಳಿಗೆ ನಿವೇದನೆ ಮಾಡದೆ ತಿನ್ನುವುದಿಲ್ಲ"

ಎಂದನು. " ನಿನ್ನ ಗುರುಗಳಿಗೂ ಹೀಗೆ ಅಪೂಪವನ್ನು ಕೊಟ್ಟಾಗ ಅವರು ಅವರ ಗುರುಗಳಿಗೆ ನಿವೇದಿಸದೇ ತಿಂದರು. ನೀನೂ ತಿನ್ನು ಪರವಾಗಿಲ್ಲ" ಎಂದರು ಅಶ್ವಿನೀ ದೇವತೆಗಳು. ಆದರೂ ಗುರುಗಳಿಗೆ ನಿವೇದಿಸದೆ ತಿನ್ನುವುದಿಲ್ಲ ಎಂದನು ಉಪಮನ್ಯು. ಇವನ ಗುರುಭಕ್ತಿಗೆ ಮೆಚ್ಚಿದ ಅಶ್ವಿನೀದೇವತೆಗಳು ದೃಷ್ಟಿದಾನ ಮಾಡಿದರಲ್ಲದೆ ನಿನ್ನ ಗುರುಗಳ ದಂತಗಳು ಕಬ್ಬಿಣದಂತೆ ಕಪ್ಪಾದರೂ ನಿನ್ನ ದಂತಗಳು ಹಿರಣ್ಮಯವಾಗಲೆಂದು ಹರಸಿದರು. ಗುರುಗಳಂತೆ ನಿರ್ದಯ ಪರೀಕ್ಷೆಗೆ ಶಿಷ್ಯರನ್ನು ಬಲಿಕೊಡದೆ ದಯಾವಂತನೆಂದು ಪ್ರಸಿದ್ಧನಾಗುವಿ ಎಂಬುದು ಅಶ್ವಿನೀದೇವತೆಗಳ ಭಾವ. ಅಶ್ವಿನೀದೇವತೆಗಳ ಅನುಗ್ರಹದಿಂದ ಕಣ್ಣು ಪಡೆದು ಬಂದ ಉಪಮನ್ಯುವನ್ನು ನೋಡಿ ಹರ್ಷಗೊಂಡ ಧೌಮ್ಯರು - ಎಲ್ಲ ವೇದ, ಧರ್ಮ ಶಾಸ್ತ್ರಗಳೂ ನಿನ್ನ ಪ್ರತಿಭೆಗೆ ವಿಷಯವಾಗಲೆಂದರು.

ಮತ್ತೊಬ್ಬ ಶಿಷ್ಯ " ವೇದ". ಸ್ವಲ್ಪ ದಿವಸ ನನ್ನ ಮನೆಯಲ್ಲಿದ್ದು ಶುಶ್ರೂಷೆ ಮಾಡು. ಶ್ರೇಯಃಪ್ರಾಪ್ತಿಯಾಗುವುದೆಂದರು ಧೌಮ್ಯರು. ಹಾಗೆ ಆಗಲೆಂದು ವೇದ ಗುರು ಶುಶ್ರೂಷೆಗೆ ಅನುವಾದ. ನೊಗ ಏರಿಸಿದ ಗೋವಿನಂತೆ ಶೀತ, ಉಷ್ಣ, ಹಸಿವೆ, ಬಾಯಾರಿಕೆ ಯಾವುದನ್ನೂ ಲೆಕ್ಕಿಸದೆ ಅಪ್ರತಿಕೂಲನಾಗಿ ವಿಧೇಯನಾಗಿ ನಡೆದು ಕೊಂಡ. ತನ್ನ ಶುಶ್ರೂಷಾಪರೀಕ್ಷೆಯಲ್ಲಿ ತೇರ್ಗಡೆಯಾದ ವೇದನಿಗೆ ಎಲ್ಲ ವೇದಗಳು, ಶಾಸ್ತ್ರಗಳೂ ಪ್ರತಿಭಾತವಾಗುವಂತೆ ಹರಸಿ ಕಳಿಸಿದರು. ಗುರುಗಳ ತೀವ್ರವಾದ ಶುಶ್ರೂಷೆಯ ಕಷ್ಟವನ್ನು ಅನುಭವಿಸಿ ಅರಿತಿದ್ದ ವೇದ ಮುಂದೆ ತನ್ನ ಗುರುಕುಲದಲ್ಲಿ ಶಿಷ್ಯರನ್ನು ಗುರುಶುಶ್ರೂಷೆಯೆಂಬ ಅಗ್ನಿಪರೀಕ್ಷೆಗೆ ಗುರಿಪಡಿಸಲಿಲ್ಲ. ಜನಮೇಜಯ ಮತ್ತು ಪೌಷ್ಯ ಎಂಬ ರಾಜರುಗಳು ಈ ವೇದಮುನಿಯನ್ನು ತಮ್ಮ ಗುರುಗಳನ್ನಾಗಿ ಸ್ವೀಕರಿಸಿದರು.



# ಬ್ರಹ್ಮಜ್ಞಾನಿಗಳ ಅವಮಾನ ಸಲ್ಲದು

ಒಮ್ಮೆ ಕಶ್ಯಪರು ಪುತ್ರಕಾಮನೆಯಿಂದ ಯಾಗ ಮಾಡಲು ಸಂಕಲ್ಪಿಸಿದರು. ದೇವ, ಋಷಿ, ಗಂಧರ್ವರೂ ಅವರಿಗೆ ಯಜ್ಞಶಾಲೆಯಲ್ಲಿ ಸಹಾಯಕರಾಗಿದ್ದರು. ದೇವೇಂದ್ರನು ಯಜ್ಞಕ್ಕೆ ಬೇಕಾದ ಒಣಕಟ್ಟಿಗೆಗಳನ್ನು ತರಲು ನಿಯುಕ್ತನಾಗಿದ್ದನು. ತನ್ನ ಶಕ್ತಿಗೆ ಅನುಸಾರವಾಗಿ ದೊಡ್ಡ ಕಟ್ಟಿಗೆಯ ಹೊರೆಯನ್ನು ಹೊತ್ತು ತರುತ್ತಿದ್ದ ಇಂದ್ರನು ದಾರಿಯಲ್ಲಿ ಕಶ್ಯಪರಿಂದ ಆಜ್ಞಪ್ತರಾಗಿ ಸಮಿತ್ತು ತರುತ್ತಿದ್ದ ವಾಲಖಿಲ್ಯರನ್ನು ಕಂಡನು. ವಾಲಖಿಲ್ಯರು ಅಂಗುಷ್ಠಪರ್ವದಷ್ಟೆ ಗಾತ್ರದವರು. ಅನೇಕ ಸಂಖ್ಯೆಯ ವಾಲಿಖಿಲ್ಯ ಮುನಿಗಳು ಒಂದು ಪಲಾಶ ಸಮಿಧೆಯನ್ನು ಹೊತ್ತು ತರುತ್ತಿದ್ದರು. ಹ್ರಸ್ವ ಶರೀರದವರಾದ ಆ ಮುನಿಗಳು ಗೋ ಹೆಜ್ಜೆಯಷ್ಟು ಆಳದ ನೀರಿನಲ್ಲಿಯೇ ಮುಳುಗಿಬಿಡುತ್ತಿದ್ದರು. ವೀರ್ಯಮತ್ತನಾದ ದೇವೇಂದ್ರ ವಾಮನಾಕೃತಿಯ ವಾಲಖಿಲ್ಯರು ಸಮಿಧೆ ತರುತ್ತಿರುವುದನ್ನು ನೋಡಿ ಅಪಹಾಸ್ಯ ಮಾಡಿದ. ಅದರಿಂದ ಕ್ರುದ್ಧರಾದ ವಾಲಖಿಲ್ಯರು ಮತ್ತೊಬ್ಬ ಇಂದ್ರನನ್ನು ಬಯಸಿ



ತಪಸ್ಸು ಹೋಮಗಳನ್ನು ಮಾಡಿದರು. ಇದರಿಂದ ಹೆದರಿದ ದೇವೇಂದ್ರ ಕಶ್ಯಪರಲ್ಲಿ ಶರಣಾದ. ಕಶ್ಯಪರು ವಾಲಖಿಲ್ಯರನ್ನು ಸಂತೈಸಿ ಉಪಾಯವಾಗಿ ಹೇಳಿದರು -

" ಮುನಿಗಳೇ ! ನೀವೇನೋ ಬೇರೊಬ್ಬ ಇಂದ್ರನಿಗಾಗಿ ತಪಸ್ಸು ಮಾಡುತ್ತಿರುವಿರಿ. ಆದರೆ ಬ್ರಹ್ಮದೇವರು ಈಗಿರುವ ದೇವೇಂದ್ರನನ್ನು ಇಂದ್ರಸ್ಥಾನದಲ್ಲಿ ನಿಯೋಜಿಸಿರುವರು. ನಿಮ್ಮ ತಪಸ್ಸಿನಿಂದ ಬ್ರಹ್ಮದೇವರ ಮಾತು ಸುಳ್ಳಾಗಬೇಕೆ ? ಆದರೆ ಇಂದ್ರನಿಗಾಗಿ ನೀವು ಮಾಡಿದ ತಪಸ್ಸು ವ್ಯರ್ಥವಾಗಬಾರದು. ಅದಕ್ಕಾಗಿ ಒಂದು ಉಪಾಯ. ನಿಮ್ಮ ಅಪೇಕ್ಷೆಯಂತೆ ದೊರಕಬೇಕಾದ ಇಂದ್ರ ಪಕ್ಷೀಂದ್ರನಾಗಲಿ "- ಎಂದರು. ಕಶ್ಯಪರ ಸಲಹೆಗೆ ಶಾಂತಚಿತ್ತರಾಗಿ - ವಾಲಖಿಲ್ಯರು ಒಪ್ಪಿದರಲ್ಲದೆ, "ಕಶ್ಯಪರೇ ! ನೀವು ಪುತ್ರಕಾಮರಾಗಿ ಹೋಮವನ್ನು ನಡೆಸುತ್ತಿರುವಿರಿ. ನಾವು ಇಂದ್ರಕಾಮರಾಗಿ ತಪಸ್ಸು ಯಾಗಗಳನ್ನು ಮಾಡುತ್ತಿದ್ದೇವೆ. ನಮ್ಮ ಸಂಕಲ್ಪವೂ ನಿಮ್ಮ ಕಾರ್ಯದಿಂದಲೇ ಸಫಲವಾಗಲಿ ಎಂದರು.

ಇದೇ ಸಮಯಕ್ಕೆ ಕಶ್ಯಪರ ಪತ್ನಿಯಾದ ವಿನತಾದೇವಿ ಪುತ್ರಕಾಮಳಾಗಿ ತೀವ್ರ ತಪಸ್ಸನ್ನು ಮಾಡಿದುದಲ್ಲದೆ ಋತುಕಾಲದಲ್ಲಿ ಕಶ್ಯಪರನ್ನು ಸಮೀಪಿಸಿದಳು. ಕಶ್ಯಪರು ನುಡಿದರು - " ಪ್ರಿಯೇ ! ಇಂದಿನ ನಿನ್ನ ಮನೋರಥ ಈಡೇರುವುದು. ವಾಲಖಿಲ್ಯರ ತಪಸ್ಸು, ನನ್ನ ಸಂಕಲ್ಪಗಳಿಂದ ವೀರರಾದ ಇಬ್ಬರು ಗಂಡು ಮಕ್ಕಳು ಹುಟ್ಟುವರು". ಬ್ರಹ್ಮದೇವರು ಇಂದ್ರನಿಗೆ ಧೈರ್ಯ ತುಂಬಿದರು - " ನಿನ್ನ ಪದವಿಗೆ ಧಕ್ಕೆ ಇಲ್ಲ . ನಿನ್ನ ಭ್ರಾತೃಗಳಾಗಿ ಇಬ್ಬರು ಸಹಾಯಕರು ಹುಟ್ಟುವರು." ವಿನೀತಳಾದ ವಿನತೆ ಇಬ್ಬರು ಗಂಡು ಮಕ್ಕಳಿಗೆ ಜನ್ಮ ಕೊಟ್ಟಳು - ಅವರೇ ಅರುಣ ಮತ್ತು ಗರುಡ. ಅರುಣ ಸೂರ್ಯ ಸಾರಥಿಯಾದ. ಗರುಡ ಶ್ರೀಹರಿಗೆ ವಾಹನನಾದನು.

ಬ್ರಹ್ಮಜ್ಞಾನಿಗಳಾದ ವಾಲಖಿಲ್ಯರನ್ನು ಅವಮಾನಿಸಿದ ದೇವೇಂದ್ರ ವಾಲಖಿಲ್ಯರು ಬೇರೆ ಇಂದ್ರನನ್ನು ಬಯಸಿದ್ದರಿಂದ ಭಯಗ್ರಸ್ತನಾಗಬೇಕಾಯಿತು. ಆಕಾರದಲ್ಲಿ ವಾಮನರಾದರೂ ಆಚಾರದಲ್ಲಿ ತ್ರಿವಿಕ್ರಮರಾಗಿದ್ದರು ವಾಲಖಿಲ್ಯರು. ಶರೀರದ ವಿಕಾರವನ್ನು ಮಾತ್ರ ನೋಡಿ ಹೀಗಳೆಯಬಾರದು. ಯಾವ ಶರೀರದಲ್ಲಿ ಎಂಥ ತೇಜಸ್ವಿ ಬ್ರಹ್ಮಜ್ಞಾನಿಗಳು ಅಡಗಿರುವರೋ ಯಾರಿಗೆ ತಿಳಿದಿದೆ ? ತಪ್ಪು ಮಾಡಿದ್ದರೂ ತಪ್ಪನ್ನು ಒಪ್ಪಿಕೊಂಡು ಮಹಾತ್ಮರಲ್ಲಿ ಶರಣಾದರೆ ಉಪಾಯವಾಗಿ ಅಪಾಯದಿಂದ ಪಾರಾಗಬಹುದು ಕೂಡ - ಇಂದ್ರನಂತೆ.

▮ ▮ ▮

# ಸುಂದ - ಉಪಸುಂದ

ಹಿರಣ್ಯಕಶಿಪುವಿನ ವಂಶದಲ್ಲಿ ನಿಕುಂಭ ಎಂದೊಬ್ಬ ಅಸುರ. ಅವನಿಗೆ ಇಬ್ಬರು ಗಂಡು ಮಕ್ಕಳು - ಸುಂದ, ಉಪಸುಂದ. ಒಬ್ಬರನ್ನೊಬ್ಬರು ಬಿಟ್ಟಿರುವಂತಿಲ್ಲ. ಊಟ, ಹರಟೆ, ನಿದ್ದೆ ಎಲ್ಲ ಒಟ್ಟಿಗೇ. ಯಾವುದೇ ಕಾರ್ಯದಲ್ಲೂ ಇಬ್ಬರದೂ ಒಂದೇ ನಿರ್ಧಾರ. ಒಬ್ಬರೇ ಇಬ್ಬರಾಗಿದ್ದಾರೆನ್ನುವಂಥ ಅನ್ಯೋನ್ಯತೆ.

ಒಮ್ಮೆ ಅವರಿಗೆ ಮೂರ್ಲೋಕ ವಿಜಯ ಸಂಪಾದಿಸಬೇಕೆಂದು ಹಂಬಲ. ಅದಕ್ಕಾಗಿ ತೀವ್ರ ತಪಗೈದರು. ಅವರ ತಪಸ್ಸಿಗೆ ಅಡ್ಡಿ ಮಾಡಲು ದೇವತೆಗಳು ಸ್ತ್ರೀಯರನ್ನು ಕಳಿಸಿದರು. ಆದರೆ ಅದಕ್ಕೂ ಅವರ ಏಕಾಗ್ರತೆ ಭಂಗಗೊಳ್ಳಲಿಲ್ಲ. ಮತ್ತೊಂದು ಮಾಯೆ ಸೃಷ್ಟಿಸಿದರು. ಆ ರಾಕ್ಷಸರ ತಾಯಿ, ಸಹೋದರಿಯರು, ಹೆಂಡತಿಯರೇ ಬಂದು, ತಪಸ್ಸು ನಿಲ್ಲಿಸುವಂತೆ ಗೋಗರೆಯುವ ದೃಶ್ಯವನ್ನು ಸಂಯೋಜಿಸಿದರು. ಆದರೂ ಅವರ ತಪೋಭಂಗವಾಗಲಿಲ್ಲ. ಮತ್ತೆ ಪಿತಾಮಹನಲ್ಲಿ ಶರಣಾದರು.



ಆಗ ಬ್ರಹ್ಮದೇವರೇ ಆ ಅಸುರರ ಮುಂದೆ ಪ್ರಾದುರ್ಭವಿಸಿದರು. ಬ್ರಹ್ಮದೇವರನ್ನು

ಕಂಡು ಸಂತಸಗೊಂಡ ಸುಂದೋಪಸುಂದರು, ''ನಾವು ಅಮರರಾಗುವಂತೆ ಅನುಗ್ರಹಿಸು '' ಎಂದರು. ಬ್ರಹ್ಮದೇವರು ಹೇಳಿದರು - '' ಅಮರತ್ವವನ್ನು ಬಯಸಿ ನೀವು ತಪಸ್ಸಿಗೆ ಕೂಡಲಿಲ್ಲ. ತಪಸ್ಸನ್ನು ಪ್ರಾರಂಭಿಸುವಾಗ ತ್ರೈಲೋಕ್ಯ ವಿಜಯವನ್ನಷ್ಟೆ ಬಯಸಿದ್ದಿರಿ. ಅದನ್ನೇ ಕೊಡುತ್ತೇನೆ. ಅಮರತ್ವವನ್ನು ಕೊಡೆನು. ''ನಮ್ಮಿಬ್ಬರನ್ನು ಹೊರತಾಗಿ ಯಾರಿಂದಲೂ ನಮಗೆ ಭಯ ಬಾರದಂತೆ ಅನುಗ್ರಹಿಸಿರಿ'' ಎಂದರು ಅಸುರರು. ' ತಥಾಸ್ತು ' ಎಂದು ಬ್ರಹ್ಮದೇವರು ಅಂತರ್ಧಾನರಾದರು.

ಅಸುರ ಬುದ್ಧಿಯ ಸುಂದೋಪಸುಂದರಿಗೆ ಈ ತಪೋಬಲ ಲೋಕಾಪಕಾರ ಕಾರ್ಯಕ್ಕೆ ಪ್ರಚೋದನೆ ನೀಡಿತು. ಭೂಮಿಯನ್ನೆಲ್ಲ ವ್ಯಾಪಿಸಿದ ಅವರ ಪ್ರಭಾವ ದೇವಲೋಕಕ್ಕೂ ಲಗ್ಗೆಯಿಟ್ಟಿತು. ಗಾಬರಿಗೊಂಡ ದೇವತೆಗಳು ಬ್ರಹ್ಮದೇವರ ಲೋಕವನ್ನು ಸೇರಿದರು. ಸುರಲೋಕವನ್ನೆಲ್ಲ ಗೆದ್ದು ಬಂದ ಈ ಅಸುರರು ದೇವತಾಬಲಕ್ಕೆ ಮೂಲವಾದ ಯಜ್ಞ ಯಾಗಾದಿಗಳನ್ನು ಮಾಡದಂತೆ ಭೂಲೋಕದ ದ್ವಿಜರನ್ನು ತಡೆದರು. ಎಲ್ಲೆಡೆ ಇವರ ಉಪದ್ರವ ಹೆಚ್ಚಾದಾಗ ದೇವತೆಗಳು ಪುನಃ ಬ್ರಹ್ಮದೇವರಲ್ಲಿ ಮೊರೆಯಿಟ್ಟರು. ಬ್ರಹ್ಮದೇವರು ವಿಶ್ವಕರ್ಮನಿಗೆ ಒಬ್ಬ ಸುಂದರಿಯನ್ನು ನಿರ್ಮಾಣ ಮಾಡುವಂತೆ ತಿಳಿಸಿದರು. ಎಲ್ಲ ಸಂಪತ್ತುಗಳನ್ನು ತಿಲದಷ್ಟು ಉಪಯೋಗಿಸಿ ನಿರ್ಮಿಸಿದ ಆ ಹೆಣ್ಣಿನ ಹೆಸರು '' ತಿಲೋತ್ತಮೆ''. ಸುಂದೋಪಸುಂದರಲ್ಲಿ ಜಗಳ ಹುಟ್ಟಿ, ಇಬ್ಬರೂ ಸಾಯುವಂತೆ ನೀನು ಮಾಡಬೇಕೆಂದು ತಿಲೋತ್ತಮೆಗೆ ಬ್ರಹ್ಮದೇವರ ಆದೇಶ.

ಎದುರು ನಿಲ್ಲುವವರಿಲ್ಲದೆ ನಿರುದ್ಯೋಗಿಗಳಾದ ಸುಂದೋಪಸುಂದರು ಹಾಯಾಗಿ ವಿಹಾರ ಮಾಡುತ್ತಿದ್ದರು. ಹೀಗೆ ವಿಂಧ್ಯಪರ್ವತದ ಒಂದು ಶಿಲಾ ತಲದಲ್ಲಿ ಅನೇಕ ಸ್ತ್ರೀಯರೊಂದಿಗೆ ವಿಹರಿಸುತ್ತಿದ್ದಾಗ ತಿಲೋತ್ತಮೆಯು ಹೂ ಬಿಡಿಸುತ್ತಾ ಬಂದಳು. ತಿಲೋತ್ತಮೆಯನ್ನು ಕಂಡಾಕ್ಷಣ ಮೋಹಪರವಶರಾದ ಆ ಪಾನಮತ್ತ ಅಸುರರು ಓಡಿ ಬಂದರು. ಸುಂದ ಆಕೆಯ ಬಲಗೈಯನ್ನು ಉಪಸಂದ ಎಡಗೈಯನ್ನು ಹಿಡಿದು ತನಗೆ ಎಂದು ಹಟ ಹಿಡಿದರು. ಸುಂದ ತನ್ನ ತಮ್ಮನಿಗೆ ನುಡಿದ - '' ಇವಳು ನಿನಗೆ

ಅತ್ತಿಗೆ'' ಉಪಸುಂದನು ಹೇಳಿದ - ನಿನ್ನ ತಮ್ಮನ ಹೆಂಡತಿ - ಇವಳು ಜೋಕೆ ! ಹೀಗೆ ತಿಲೊತ್ತಮೆಯ ಬಯಕೆ ಬಲಿಯುತ್ತಲೆ ವರಬಲ, ದೇಹಬಲಗಳಿಂದ ಮತ್ತರಾದ ಅವರಿಬ್ಬರಿಗೆ ಕದನವೇ ಶುರುವಾಯಿತು. ಪರಸ್ಪರ ವೀರಾವೇಶದಿಂದ ಕಾದಾಡುತ್ತಾ ಗದೆಯಿಂದ ಹೊಡೆದುಕೊಂಡು ಇಬ್ಬರೂ ಸತ್ತರು. ತಿಲೋತ್ತಮೆಯು ಬ್ರಹ್ಮದೇವರಲ್ಲಿಗೆ ಹಿಂತಿರುಗಿದಳು.

ಸುರಕಾರ್ಯ ಸಾಧಿಸಿದ ತಿಲೋತ್ತಮೆಗೆ ಬ್ರಹ್ಮದೇವರು ವರವಿತ್ತರು - ಸೂರ್ಯ ಸಂಚರಿಸುವ ಲೋಕಗಳಲ್ಲಿ ನೀನು ಸಂಚರಿಸುವವಳಾಗು. ಸೂರ್ಯನ ದಿವ್ಯ ಪ್ರಭೆಯಿಂದಾಗಿ ಯಾರೂ ನಿನ್ನನ್ನು ಸ್ಪಷ್ಟವಾಗಿ ನೋಡಲಾಗುವುದಿಲ್ಲ.

ಇಂದ್ರ ತನ್ನ ಪದವಿಯನ್ನು ಪುನಃ ಪಡೆದ. ಬ್ರಹ್ಮದೇವರು ತನ್ನ ಲೋಕವನ್ನು ಸೇರಿದರು.

ಸಹೋದರರು ಒಂದೇ ವಸ್ತುವಿಗೆ ಆಸೆ ಪಟ್ಟು ಸರ್ವರೂ ನಾಶ ಹೊಂದುವಂತಾಗ ಬಾರದು. ತಮ್ಮ ಸೌಹಾರ್ದಕ್ಕೆ ಧಕ್ಕೆಯಾಗದಂಥ ಒಪ್ಪಂದವನ್ನು ಮಾಡಿಕೊಂಡು ಸಹಬಾಳ್ವೆ, ಸಂತಸದ ಬಾಳ್ವೆಗಳನ್ನು ನಡೆಸಬೇಕು.



# ಅಹಿಂಸಾ ಪರಮೋ ಧರ್ಮಃ

ಸ್ಥೂಲಕೇಶ ಎಂದೊಬ್ಬ ಋಷಿಗಳು. ಅವರ ಆಶ್ರಮದ ಪರಿಸರದಲ್ಲಿ ಒಂದು ಹೆಣ್ಣುಮಗುವನ್ನು ಆಕಸ್ಮಾತ್ ಆಗಿ ಅವರು ಕಂಡರು. 'ವಿಸ್ವಾವಸು' ಎಂಬ ಗಂಧರ್ವರಾಜನಿಗೆ ಮೇನಕೆಯಲ್ಲಿ ಹುಟ್ಟಿದ ಮಗು ಅದು. ಮೇನಕೆಯು ನಿರ್ದಯಳಾಗಿ ಆ ಮಗುವನ್ನು ಅಲ್ಲಿ ಬಿಟ್ಟು ಹೋಗಿದ್ದಳು. ಎಲ್ಲ ಪ್ರಮದೆಯರಿಗಿಂತ ಶ್ರೇಷ್ಠಳಾದುದರಿಂದ ಆ ಹೆಣ್ಣಿಗೆ 'ಪ್ರಮದ್ವರಾ' ಎಂದು ಋಷಿಗಳು ನಾಮಕರಣ ಮಾಡಿದರು. ಮದುವೆಯ ವಯಸ್ಸಿಗೆ ಬಂದ ಆ ಸುಂದರಿಯನ್ನು ರುರು ಕಂಡನು.



ಚ್ಯವನರಿಗೆ ಸುಕನ್ಯೆಯಲ್ಲಿ ಹುಟ್ಟಿದ ರುರುವಿನ ತಂದೆ ಪ್ರಮತಿಯೂ ಆ ಪ್ರಮದ್ವರೆಯ ಬಯಕೆಯನ್ನು ಋಷಿಗಳಲ್ಲಿ ವ್ಯಕ್ತಪಡಿಸಿದ್ದರು. ಸ್ಥೂಲಕೇಶ ಋಷಿಗಳು ಪ್ರಮದ್ವರೆಯನ್ನು ರುರುವಿಗೆ ಕೊಟ್ಟು ವಿವಾಹ ಮಾಡುವ ನಿರ್ಧಾರ ಮಾಡಿದರು.

ವಿವಾಹಕ್ಕೆ ಹತ್ತಿರದ ಒಂದು ದಿನ ಪ್ರಮದ್ವರೆ ಗೆಳತಿಯರಿಂದ ಕೂಡಿಕೊಂಡು ಆಡುತ್ತಿದ್ದಳು. ಅಡ್ಡವಾಗಿ ಮಲಗಿದ್ದ ಸರ್ಪವೊಂದನ್ನು ತಿಳಿಯದೆ ತುಳಿದಳು. ಆ ಸಮಯಕ್ಕೆ ಅವಳ ಆಯುಷ್ಯವೂ ಮುಗಿದಿತ್ತು. ಆ ಸರ್ಪ ಕಾಲಪುರುಷನ ಪ್ರೇರಣೆಯಿಂದ ಪ್ರಮದ್ವರೆಯನ್ನು ಕಚ್ಚಿತು. ಅವಳು ಕೂಡಲೆ ಮರಣವನ್ನು ಹೊಂದಿದಳು.

ಆ ಮರಣ ವಾರ್ತೆಯನ್ನು ಕೇಳಿ ಸಮೀಪದ ಆಶ್ರಮಗಳಿಂದ ಆತ್ರೇಯ, ಕುಶಿಕ ಮುಂತಾದ ಮುನಿಗಳೆಲ್ಲ ಧಾವಿಸಿ ಬಂದರು. ಸತ್ತು ಬಿದ್ದಿದ್ದ ಪ್ರಮದ್ವರೆ ಇನ್ನಷ್ಟು ಹೆಚ್ಚು ಸುಂದರವಾಗಿ ಕಾಣುತ್ತಾ ಎಲ್ಲರ ಉತ್ಕಟ ದುಃಖಕ್ಕೆ ಕಾರಣಳಾದಳು. ಪ್ರಮತಿ, ರುರು ರೋದನಗೈದರು. ರುರುವಿಗಂತೂ ದುಃಖ ತಡೆಯಲಾಗಲಿಲ್ಲ. ಕಾಡಿಗೆ-ಹೋಗಿ ಬೊಬ್ಬಿಟ್ಟ. "ನಾನು ನೀಡಿದ ದಾನ, ಮಾಡಿದ ತಪಸ್ಸು, ಗೌರವದ ಗುರುಗಳಾರಾಧನೆ ಇವುಗಳಿಂದ ನನ್ನ ಪ್ರಮದ್ವರೆ ಬದುಕಲಿ" ಎಂದು ಗೋಗರೆದ. ಆಗ ದೇವದೂತನು ಸಲಹೆಯಿತ್ತನು. "ಗಂಧರ್ವಾಪ್ಸರೆಯರ ಪುತ್ರಿಯಾದ ಪ್ರಮದ್ವರೆಯ ಆಯುಷ್ಯವೇ ತೀರಿರುವಾಗ ನೀನು ಯಾವ ಪುಣ್ಯ ಮಾಡಿದ್ದರೇನು? ಅವಳು ಬದುಕುವುದು ಹೇಗೆ ! ಅವಳು ಬದುಕಬೇಕಾದರೆ ನಿನ್ನ ಆಯುಷ್ಯದಲ್ಲಿ ಅರ್ಧವನ್ನು ಧಾರೆಯೆರೆ" ಹಾಗೇ ಆಗಲೆಂದ ರುರು ತನ್ನ ಆಯುರರ್ಧವನ್ನು ಧಾರೆಯೆರೆದ. ಅಷ್ಟರಲ್ಲಿ ಗಂಧರ್ವ ದೇವದೂತರು ಯಮಧರ್ಮರಾಜನಲ್ಲಿಗೆ ಹೋದರು. ರುರುವಿನ ಅರ್ಧಾಯುಸ್ಸನ್ನು ಕೊಟ್ಟು ಪ್ರಮದ್ವರೆಯನ್ನು ಬದುಕಿಸುವಂತೆ ಕೇಳಿಕೊಂಡರು. ಧರ್ಮರಾಜನ ಒಪ್ಪಿಗೆ ದೊರೆಯಿತು. ಪ್ರಮದ್ವರೆ ಎಚ್ಚೆತ್ತವಳಂತೆ ಎದ್ದಳು. ರುರುವಿಗೆ ಸಂತಸವೋ ಸಂತಸ. ಅವಳ ಮಾತಾಪಿತೃಗಳು ಅವರಿಬ್ಬರಿಗೆ ಮದುವೆಯನ್ನು ಮಾಡಿದರು.

ಪ್ರಮದ್ವರೆ ದೊರೆತಮೇಲೂ ರುರುವಿಗೆ ಆಕೆಯನ್ನು ಕಚ್ಚಿದ ಸರ್ಪಕುಲದ ಮೇಲೆ ಸಿಟ್ಟು ಹೋಗಲಿಲ್ಲ. ಸರ್ಪಗಳನ್ನು ನೋಡಿದಾಗಲೆಲ್ಲ ದ್ವೇಷದಿಂದ ಮೈ ಉರಿಯುತ್ತಿತ್ತು. ಎಷ್ಟೋ ಸರ್ಪಗಳನ್ನು ಕೊಂದು ಹಾಕಿದ. ಹೀಗೆ ಸರ್ಪಸಂಹಾರದ ವ್ರತ ತೊಟ್ಟು ರುರು ಕಾಡಿನಲ್ಲಿ ಬರುವಾಗ ವಯಸ್ಸಾದ, ಮಲಗಿರುವ

ಸರ್ಪವೊಂದನ್ನು ಕಂಡನು. ಸಿಟ್ಟಿನಿಂದ ಕೊಲ್ಲಬೇಕೆಂದು ಕೋಲೊಂದನ್ನು ಮೇಲೆತ್ತಿದ. ಕೂಡಲೆ ಡುಂಡುಭ ಎಂಬ ಹೆಸರಿನ ಆ ಸರ್ಪ, " ನಾನು ನಿರಪರಾಧಿ, ನನ್ನನ್ನೇಕೆ ಕೊಲ್ಲುವಿ ?" ಎಂದು ಗಾಬರಿಯಿಂದ ಕೇಳಿತು. ನನ್ನ ಪ್ರಾಣಸಮಳಾದ ಭಾರ್ಯೆಯನ್ನು ಸರ್ಪವೊಂದು ಕಚ್ಚಿತು. ಅಂದಿನಿಂದ ನನಗೆ ಸರ್ಪಸಂತತಿಯ ಮೇಲೇ ಕೋಪ. ಅದಕ್ಕೆಂದೇ ನಿನ್ನನ್ನು ಕೊಲ್ಲುತ್ತಿರುವೆ. ರುರು ಉತ್ತರಿಸಿದ. ಒಬ್ಬರ ಅಪರಾಧಕ್ಕೆ ಎಲ್ಲರನ್ನೂ ಕೊಲ್ಲುವುದು ಯಾವ ನ್ಯಾಯ? ಸರ್ಪದ ಸಾದೃಶ್ಯವಿದ್ದ ಮಾತ್ರಕ್ಕೆ ನಮ್ಮನ್ನು ಕೊಲ್ಲ ಬೇಡ. ನಾವು ಯಾರನ್ನೂ ಕಚ್ಚುವುದಿಲ್ಲ. ಡುಂಡುಭಸರ್ಪದ ಈ ವಿವರಣೆಯನ್ನು ಕೇಳಿದ ರುರು ಕೊಲ್ಲುವ ಯತ್ನವನ್ನು ನಿಲ್ಲಿಸಿ " ನೀವು ಯಾರೆಂದು " ಕೇಳಿದ.



ಹಿಂದೆ ನಾನೊಬ್ಬ ಋಷಿ. ನನಗೊಬ್ಬ ಗೆಳೆಯ, ಹೆಸರು " ಖಗಮ ". ಬಾಲ್ಯದಲ್ಲಿ ನಾನು ತಮಾಷೆಗಾಗಿ ಹುಲ್ಲಿನಿಂದ ಹಾವೊಂದನ್ನು ಮಾಡಿ ನನ್ನ ಗೆಳೆಯನನ್ನು ಹೆದರಿಸಿದೆ. ಅದರಿಂದ ಹೆದರಿದ ಗೆಳೆಯ – " ನೀನೆಂಥ ಸರ್ಪದಿಂದ ನನ್ನನ್ನು ಹೆದರಿಸಿದೆಯೋ ನೀನೂ ಹಾಗೇ ಸರ್ಪ ಆಗು " ಎಂದು ಶಾಪವಿತ್ತನು.

ಶಾಪದಿಂದ ಕಳವಳಗೊಂಡ ನಾನು, ಗೆಳೆಯನೆಂಬ ಸಲುಗೆಯಿಂದ ಹಾಸ್ಯಕ್ಕಾಗಿ ಹೆದರಿಸಿದೆ. ತಪ್ಪಾಯಿತು, ಕ್ಷಮಿಸೆಂದು ಬೇಡಿಕೊಂಡೆ. '' ಆಗ ನನ್ನ ಮಾತು ಸುಳ್ಳಾಗದು. ಆದರೆ ಮುಂದೊಮ್ಮೆ ಪ್ರಮತಿಯ ಮಗ ರುರು ನಿನ್ನನ್ನು ನೋಡುತ್ತಾನೆ. ಅವನ ದರ್ಶನವಾದಾಗ ನಿನಗೆ ಶಾಪ ಮೋಕ್ಷ ಎಂದಿದ್ದನು. ಈದಿನ ಆದರ ಪರಿಣಾಮವಾಗಿ ನಿನ್ನ ದರ್ಶನವಾಗಿ ಶಾಪಮೋಚನೆಯಾಯಿತು. ಆದರೆ ನಿನಗೆ ನನ್ನದೊಂದು ಕಿವಿ ಮಾತು –

> '' ಅಹಿಂಸಾ ಪರಮೋ ಧರ್ಮ : ಸರ್ವಪ್ರಾಣಭೃತಾಂ ಪರ ।
> ತಸ್ಮಾತ್ ಪ್ರಾಣಭೃತ : ಸರ್ವಾನ್ನ ಹಿಂಸ್ಯಾದ್ಬ್ರಾಹ್ಮಣ : ಕ್ವಚಿತ್ ॥
> ಬ್ರಾಹ್ಮಣ : ಸೌಮ್ಯ ಏವೇಹ ಭವತೀತಿ ಪರಾ ಶ್ರುತಿ : ॥ ''

ಅಹಿಂಸೆ ಪರಮ ಧರ್ಮ. ಆದುದರಿಂದ ಬ್ರಾಹ್ಮಣನು ಯಾವ ಪ್ರಾಣಿಯನ್ನೂ ಹಿಂಸೆಗೊಳಿಸಬಾರದು. ಬ್ರಾಹ್ಮಣ ಎಂದರೆ ಅವನು ಸೌಮ್ಯವಾಗಿಯೇ ಇರಬೇಕೆಂದು ಶ್ರುತಿ ಹೇಳಿದೆ !

ಹಾಸ್ಯಕ್ಕಾಗಿಯೂ, ಯಾರನ್ನೂ ಹೆದರಿಸಿ ಹಿಂಸಿಸಬಾರದು.

■ ■ ■

# ಅನ್ನದಾನದ ಮಹಿಮೆ

ಸತ್ಯಜಿತ್ ಎಂಬ ಒಬ್ಬ ಬ್ರಾಹ್ಮಣ. ಸದಾಚಾರ ಸಂಪನ್ನ. ಗಂಗಾನದೀ ಭಕ್ತ. ಯಾವ ನದಿಗೆ ಹೋದರೂ ಗಂಗೆಯದೇ ಸ್ಮರಣೆ. ನಿತ್ಯತೀರ್ಥಯಾತ್ರಾ ನಿರತ. ಗಂಗಾಸ್ನಾನಕ್ಕೆಂದೊಮ್ಮೆ ಹೊರಟ ಆ ವಿಪ್ರ ಕುರುಕ್ಷೇತ್ರಕ್ಕೆ ಬಂದ. ದಣಿದ ಆತ ಯಾತ್ರಿಕರಿಗೆ ಊಟ ಹಾಕುವ ಬ್ರಾಹ್ಮಣರ ಬಗ್ಗೆ ವಿಚಾರಿಸಿದ. ಆ ಗ್ರಾಮಸ್ಥರ ಮಾತಿನಂತೆ " ಸತ್ಯಕೇತು " ಎಂಬ ಬ್ರಾಹ್ಮಣನ ಮನೆಗೆ ಬಂದ. ಮನೆಗೆ ಬಂದ ಅತಿಥಿಯನ್ನು ಆದರದಿಂದ ಸ್ವಾಗತಿಸಿದ ಸತ್ಯಕೇತು. ' ನಿಮ್ಮಂಥ ಮಹಾತ್ಮರ ಆಗಮನ ನನ್ನ ಜನ್ಮಾಂತರದ ಪುಣ್ಯದ ಪ್ರಭಾವ. ಎಲ್ಲ ದೇವತೆಗಳೂ ಇಂದು ಸಂಪ್ರೀತರು. ಶ್ರೀ ಹರಿಯೂ ಇಂದು ಪ್ರಸನ್ನ. ಏಳಿ! ಭೋಜನ ಮಾಡಿರಿ ' ಎಂದು ನುಡಿದ. ಸತ್ಯಕೇತುವಿನ ಸಾದರದ ವಚನಗಳಿಂದ ಸಂತಸಗೊಂಡ ಸತ್ಯಜಿತ್ - "ಗೃಹಸ್ಥಾಶ್ರಮ, ಎಲ್ಲ ಕಡೆಯಿಂದ ಬರುವ ಹಕ್ಕಿಗಳಿಗೆ ಆಶ್ರಯ ನೀಡುವ ಮರದಂತೆ ಎಲ್ಲ ಆಶ್ರಮದವರಿಗೂ ಆಶ್ರಯಧಾಮ. ನಿನ್ನಂಥ ಗೃಹಸ್ಥ ಮತ್ತೊಬ್ಬ ಇಲ್ಲ. ಅದಿರಲಿ, ಬ್ರಾಹ್ಮಣೋತ್ತಮ! ಗಂಗಾಸ್ನಾನ ಮಾಡಿರುವೆಯಾ ?" ಎಂದು ಕೇಳಿದನು.

" ಮನ್ನಿಸಬೇಕು, ನಾನು ಇದುವರೆಗೆ ಗಂಗಾದರ್ಶನವೇ ಮಾಡಿಲ್ಲ. ನಾನು ಗಂಗಾಸ್ನಾನಕ್ಕೆ ಹೊರಟರೆ ಬಂದ ಅತಿಥಿಗಳಿಗೆ ಅನ್ನ ಹಾಕುವುದು ನಿಂತು ಹೋಗುವುದಲ್ಲ?" ಎಂದು ಸತ್ಯಕೇತು ನುಡಿದನು. ಈ ಮಾತು ಕೇಳಿ ಸತ್ಯಜಿತ್- ' ಛೆ ! ಗಂಗಾಸ್ನಾನ ಮಾಡದ ನಿನ್ನ ಮುಖದರ್ಶನ, ನಿನ್ನ ಗೃಹಭೋಜನ ಎಲ್ಲವೂ ನಿಷಿದ್ಧ. ತಿಳಿಯದೆ ಬಂದೆ ' ಎಂದು ಹೊರಟೇ ಬಿಟ್ಟ.

ಗಂಗಾನದಿಯ ದಡ ಸೇರಿದ ! ಆದರೆ ಕಂಡದ್ದು ಮರಳು. ಮರುಳಾದ ಸತ್ಯಜಿತ್, " ಅಮ್ಮ ! ಗಂಗೆ ! ನಾನು ಏನೂ ಅಪರಾಧ ಮಾಡಿಲ್ಲ. ನನಗೇಕೆ ಇಂಥ ಶಿಕ್ಷೆ? ಏಕೆ ಕಣ್ಮರೆ ?" - ಗಂಗೆಯಲ್ಲಿ ಗೋಗರೆದ. "ಸತ್ಯಕೇತುವಿನ

ಮನೆಯ ಅನ್ನ ತಿರಸ್ಕರಿಸಿ ಬಂದ ನಿನಗೆ ನಾನು ಒಲಿಯುವುದಿಲ್ಲ. ಅನ್ನದಾನಕ್ಕೆ ಸಮನಾದ ಮಹತ್ವದ ದಾನವಿಲ್ಲ. ಅನ್ನದಾನದಲ್ಲಿ ನಿರತನಾಗಿ ಅದಕ್ಕೆ ಚ್ಯುತಿ ಬಾರದಿರಲೆಂದು ಗಂಗಾಸ್ನಾನ ಮಾಡದೆ ಮನೆಯಲ್ಲಿ ಅತಿಥಿಗಳನ್ನು ಸಂತೋಷಪಡಿಸಿಕೊಂಡಿರುವ ಸತ್ಯಕೇತುವನ್ನು ತಿರಸ್ಕರಿಸಿದ ಪಾಪಕ್ಕೆ ಇದು ಶಿಕ್ಷೆ. ಹೋಗು, ಅಲ್ಲಿ ಊಟ ಮಾಡಿ ಕ್ಷಮೆ ಕೇಳು '' ಎಂದು ಗಂಗೆ ಆದೇಶಿಸಿದಳು.

ಗಂಗೆಯ ಆದೇಶದಂತೆ ಸತ್ಯಜಿತ್ ಸತ್ಯಕೇತುವಿನ ಮನೆಗೆ ತೆರಳಿದ. ಒಬ್ಬ ಬ್ರಾಹ್ಮಣರ ಆತಿಥ್ಯ ತಪ್ಪಿ ಹೋಯಿತಲ್ಲ ಎಂದು ಬೇಸರಪಟ್ಟಿದ್ದ ಸತ್ಯಕೇತು ಮೊದಲಿನಂತೆಯೇ ಗೌರವದಿಂದ ಬರಮಾಡಿಕೊಂಡು ಭೋಜನ ಹಾಕಿದ. ''ಸತ್ಯಕೇತು , ಅನ್ನದಾನದ ಮಹಿಮೆಯನ್ನು ಅರ್ಥಮಾಡಿಕೊಳ್ಳದೆ ನಿನ್ನನ್ನು ನಿಂದಿಸಿದೆ. ಕ್ಷಮಿಸು'' ಎಂದು ಕೇಳಿದನು. ಅವನ ಅನುಜ್ಞೆ ಪಡೆದು ಹೋದನು. ಗಂಗೆಯ ತುಂಬು ಪ್ರವಾಹ ಕಂಡು ಸಂತಸಪಟ್ಟ. ಮಿಂದು ಪುನೀತನಾದ.

ನಾರದ ! ಎಲ್ಲ ದಾನಗಳಿಗಿಂತ ಅನ್ನದಾನ ಶ್ರೇಷ್ಠ. ಅನ್ನ ಪ್ರಾಣ. ಅನ್ನ ಹಾಕುವವನು ಪ್ರಾಣ ಕೊಟ್ಟಂತೆಯೆ. ಹೀಗೆ ಸರ್ವಭೂತಗಳಿಗೆ ಪ್ರಾಣಪ್ರದಾನ ರೂಪವಾದ ಅನ್ನದಾನ ಭಗವಂತನಿಗೆ ತುಂಬ ಪ್ರಿಯ. ಅದರಲ್ಲಿಯೂ ಕಾರ್ತೀಕ ಮಾಸದಲ್ಲಿ ಅನ್ನದಾನ ಮಹಾಪುಣ್ಯಕರ.



# ಜ್ವರೋತ್ಪತ್ತಿ

ಎತ್ತರದ ಮೇರು ಪರ್ವತದಲ್ಲಿ ಮೂರ್ಲೋಕದಲ್ಲಿ ಪ್ರಸಿದ್ಧವಾದ ಒಂದು ಪ್ರಕಾಶಮಾನವಾದ ಶಿಖರ. ಅಲ್ಲಿ ಪಾರ್ವತೀ ಪರಮೇಶ್ವರರ ವಾಸ. ಸುತ್ತಲೂ ಅವರ ಆರಾಧಕ ಭೃತ್ಯ ಸಮೂಹ.

ದಕ್ಷಪ್ರಜಾಪತಿಯ ಯಜ್ಞಸಮಾರಂಭ. ವಿಮಾನಗಳಲ್ಲಿ ದೇವತೆಗಳ ಪ್ರಯಾಣ. ಕೈಲಾಸದಲ್ಲಿ ಉಮೆಯು ವಿಮಾನಗಳನ್ನು ಕಂಡು ಶಿವನಲ್ಲಿ ವಿಚಾರಿಸಿದಳು - 'ಎಲ್ಲಿಗೆ ಇವರ ಪ್ರಯಾಣ ?' ' ದಕ್ಷನ ಯಜ್ಞ ಸಮಾರಂಭಕ್ಕೆ' - ಸದಾಶಿವನ ಸಮಾಧಾನ. " ತಾವು ಏಕೆ ಹೊರಟಿಲ್ಲ ? " " ಅಲ್ಲಿ ನನಗೆ ಹವಿರ್ಭಾಗ ಇಲ್ಲ." ' ತಮ್ಮಂಥವರಿಗೆ ಹವಿರ್ಭಾಗವಿಲ್ಲದ ಈ ಯಜ್ಞದಿಂದೇನು ? ದುಃಖದಿಂದ, ಕೋಪದಿಂದ ಮೈ ನಡುಗುತ್ತಿದೆ. ' ಉಮೆಯು ವ್ಯಗ್ರ. ಉಮೆಯ ವ್ಯಗ್ರತೆಯಿಂದ ಉಮಾಪತಿಯು ಉಗ್ರ. ಕೆಂಜಟೆಯ ಅಪ್ಪಳಿಕೆಯಿಂದ ಭೀಷಣ ಭೃತ್ಯರ ಪ್ರಾದುರ್ಭಾವ. ದಕ್ಷಯಜ್ಞ ಪ್ರಧ್ವಂಸ.

ಉರಿಕೆಂಡವಾದ ಉಮಾಕಾಂತನ ಲಲಾಟದಿಂದ ಬೆವರುಹನಿಯ ಪಾತ. ಸ್ಫೋಟಗೊಂಡ ಕೋಪದ ಬೆವರ ಹನಿಯಿಂದ ಬೆಂಕಿ ಜ್ವಾಲೆ. ಆ ಬೆಂಕಿಯ ಮಧ್ಯದಲ್ಲಿ ಪುರುಷನೊಬ್ಬನ ಉದ್ಭವ, ಕೆಂಗಣ್ಣು, ನಿಮಿರಿನಿಂತ ತಲೆಗೂದಲು, ಮೈಯೆಲ್ಲರೋಮ, ಕರಾಳ ಕೃಷ್ಣ ವರ್ಣ, ಕೆಂಪು ಬಟ್ಟೆ, ಕುಳ್ಳ ಆಕೃತಿ. ನೋಡಲು ಭಯಂಕರ. ಆ ಭೀಷಣ ಪುರುಷ ದಕ್ಷಯಜ್ಞಕ್ಕೆ ನುಗ್ಗಿ ಎಲ್ಲರನ್ನು ಬಗ್ಗು ಬಡಿದಿದ್ದಾನೆ. ದೇವತೆಗಳೂ ಸೇರಿ ಎಲ್ಲರೂ ಹೆದರಿ ದೌಡಾಯಿಸಿದರು. ಚತುರ್ಮುಖನಲ್ಲಿ ಮೊರೆಯಿಟ್ಟರು.

ಶಿವನೆದುರು ವಿರಿಂಚ "ಮಹದೇವ ! ನಿಲ್ಲಿಸು ಕೋಪ. ದೇವತೆಗಳಿಗೆ, ಋಷಿಗಳಿಗೆ ಆಗುತ್ತಿದೆ ಸಂತಾಪ. ಎಲ್ಲ ನಿನ್ನ ಸ್ವೇದಬಿಂದು ಸಮುದ್ಭವ ಕರಾಲ ಪುರುಷನ ಪ್ರತಾಪ. ಎಲ್ಲೆಡೆ ಹಾಹಾಕಾರದ ಪ್ರಲಾಪ. ಆ ಲೋಕಭಯಂಕರ

ಪುರುಷನ ಹೆಸರು ಜ್ವರ. ಸಮಗ್ರ ಪೃಥಿವಿಯೇ ಸಹಿಸಲಾಗದು ಅವನ ಪ್ರಭಾವ. ಆ ಜ್ವರವನ್ನು ಅನೇಕರಲ್ಲಿ ಹಂಚಿ ಹಾಕು '. - ವಿರಿಂಚನ ವಿಶೇಷ ಆದೇಶ.

ಶಿರ ಬಾಗಿದ ಶಿವ. ಅನೇಕರಲ್ಲಿ ಅನೇಕರೀತಿ ಜ್ವರದ ಹಂಚಿಕೆ. ಹೋಯಿತು ಅಂಜಿಕೆ. ಒಬ್ಬೊಬ್ಬರಲ್ಲಿ ಒಂದೊಂದು ತರ ಜ್ವರ. ಆನೆಗಳಿಗೆ ಕುಂಭಸ್ಥಲದಲ್ಲಿ ತಾಪ. ಪರ್ವತಗಳಲ್ಲಿ ಅರಗು, ನೀರಿನಲ್ಲಿ ಪಾಚಿ, ಸರ್ಪಗಳಿಗೆ ಪೊರೆ, ಪಶುಗಳಿಗೆ ಪಾದರೋಗ. ಕೆಲ ಪಶುಗಳಿಗೆ ಕಣ್ಣು ಮಂಜು. ಕುದುರೆಗಳಿಗೆ ಗಂಟಲಲ್ಲಿ ಮಾಂಸಖಂಡ, ನವಿಲುಗಳಿಗೆ ಗರಿಯಲ್ಲಿ ಗೆರೆ, ಕೋಗಿಲೆಗೆ ನೇತ್ರರೋಗ, ಕುರಿಗಳಿಗೆ ಪಿತ್ಥವಿಕಾರ. ಗಿಣಿಗಳಿಗೆ ಬಿಕ್ಕು, ಹುಲಿಗಳಿಗೆ ಆಯಾಸ, ಮನುಷ್ಯರಿಗೆ ಮೈಕಾವು.

ಈ ಜ್ವರ ಹುಟ್ಟು, ಸಾವು, ಅವುಗಳ ಮಧ್ಯ - ಯಾವ ಸಂದರ್ಭದಲ್ಲಿಯೂ ಬರಬಹುದು. ಮಾಹೇಶ್ವರ ತೇಜೋರೂಪವಾದ ಈ ಜ್ವರಪುರುಷ ಸಕಲ ಪ್ರಾಣಿಮಾನ್ಯ.

ಮಹಾಭಾರತದ ಶಾಂತಿಪರ್ವದಲ್ಲಿ ಬರುವ ಈ ಜ್ವರೋತ್ಪತ್ತಿ ಕಥೆ ಪಠಿಸಿದರೆ ಜ್ವರಪರಿಹಾರ.



# ಸತಿಗೆ ಹೆದರಿದ ಧೀರ

ಜ್ಯಾಮಘ ಒಬ್ಬ ರಣಧೀರ ರಾಜ. ಶೈಬ್ಯಾ ಆತನ ಪತ್ನಿ. ಶತ್ರುಭಯಂಕರನಾದ ರಾಜನಿಗೆ ಸತಿಯ ಕಂಡರೆ ಮಹಾಭಯ. ಈ ದಂಪತಿಗಳಿಗೆ ಸಂತಾನ ಭಾಗ್ಯವಿಲ್ಲ. ಅನೇಕ ರಾಜರು ತಮ್ಮ ಹೆಣ್ಮಕ್ಕಳನ್ನು ಈ ರಾಜನಿಗೆ ಕೊಡಲು ಮುಂದೆ ಬಂದರು. ಸಂತಾನದ ಅಪೇಕ್ಷೆಯಿರುವ ರಾಜನಿಗೆ ಕನ್ಯಾಪೇಕ್ಷೆಯೂ ಇತ್ತು. ಆದರೆ ಸತಿಭಯ. ವಿವಾಹಕ್ಕೆ ಧೈರ್ಯ ಮಾಡಲಿಲ್ಲ.

ಒಮ್ಮೆ ತನ್ನ ದೇಶದ ಒಂದು ಭಾಗದಲ್ಲಿ ಶತ್ರು ಆಕ್ರಮಣವಾಯಿತು. ರಾಜನೇ ಹೋರಾಡಿ ಜಯ ಪಡೆದು ಬಂದನು. ಬರುವಾಗ ಒಂದು ಭವನದಿಂದ ಹೆಣ್ಣಿನ ಆಕ್ರಂದನ. ರಾಜಕನ್ಯೆ-ಶತ್ರುಪಕ್ಷದವಳು ಉಳಿದಿದ್ದಾಳೆ. ಸುಂದರಳಾದ ಆಕೆಯನ್ನು ನೋಡಿದ ರಾಜನ ಮನದಲ್ಲಿ ಅನುರಾಗದ ಅಂಕುರ ಮೊಳೆಯಿತು. '' ವಿಧಿಯೇ ಸಂತಾನಾರ್ಥಿಯಾದ ನನಗಾಗಿ ಈಕೆಯನ್ನು ಇಲ್ಲಿ ಬಿಟ್ಟಿದ್ದಾನೆ. '' - ಎಂದು ಭಾವಿಸಿಕೊಂಡ. ಆದರೆ ಸತಿಯ ನೆನಪಾಗಿ ಸ್ಥೈರ್ಯ ಕಳೆದುಕೊಂಡ. ಪತ್ನಿಯ ಅನುಮತಿ ಪಡೆದೇ ವಿವಾಹವಾಗಲು ನಿಶ್ಚಯಿಸಿದ. ಅವಳನ್ನು ರಥದಲ್ಲಿ ಕುಳ್ಳಿರಿಸಿ ಹೊರಟೇ ಹೊರಟ. ರಾಣಿ, ವಿಜಯೀ ರಾಜನ ಭವ್ಯ ಮೆರವಣಿಗೆಯನ್ನು ನೋಡಲು ಬಂದಳು. ರಾಜನ ಹಿಂದೆ ಇದ್ದ ಹೆಣ್ಣನ್ನು ಗಮನಿಸಿ ಕೆಂಗಣ್ಣು ತೋರಿದಳು. ''ಯಾರಿವಳು ?'' ಹೆಂಡತಿಯ ಗರ್ಜನೆಗೆ ರಾಜ ಗಾಬರಿಯಲ್ಲಿ ' ಭಾವಿ ಪತ್ನಿ' ಎನ್ನುವುದು ಬಿಟ್ಟು '' ಸೊಸೆ '' ಎಂದು ತೊದಲಿದ. ರಾಣಿ ಕಕ್ಕಾವಿಕ್ಕಿ. ಅನಪತ್ಯಳಾದ ನನಗೆ ಸೊಸೆ ಎಲ್ಲಿಂದ ? ಮುಖ ಗಂಟಿಕ್ಕಿತು. '' ನಿನಗೆ ಮುಂದೆ ಹುಟ್ಟಬಹುದಾದ ಕುಮಾರನಿಗೆ'' ಮತ್ತೊಮ್ಮೆ ತೊದಲಿದ. ಆದರೆ ಯಾವ ಮೂಹೂರ್ತದಲ್ಲಿ ರಾಜ ಆ ಮಾತು ನುಡಿದನೋ ! ನಡುವಯಸ್ಸು ಮೀರುವ ಅಂಚಿನಲ್ಲಿ ಆ ಶೈಬ್ಯೆ ಗರ್ಭಿಣಿಯಾದಳು. ಸುಂದರ ಗಂಡುಮಗುವಿನ ಜನನ. ಅವನೇ ವಿದರ್ಭ. ಆ ರಾಜಕನ್ಯೆಯನ್ನು ಈ ಮಗನಿಗೆ ಕೊಟ್ಟು ವಿವಾಹವಾಯಿತು. ಆ ಕಾಲದಲ್ಲಿ ಹುಟ್ಟಿನ ಕ್ರಮದಿಂದ ಹಿರಿತನ, ಕಿರಿತನವಿರಲಿಲ್ಲ. ವ್ಯಕ್ತಿತ್ವದಿಂದಲೇ ಹಿರಿತನವನ್ನು ಗುರುತಿಸುತ್ತಿದ್ದ ಕಾಲ ಅದು. ಅಂತೂ ಮಡದಿ ಆಗಬೇಕಿದ್ದವಳು ಸೊಸೆಯಾದಳು. ಆಗಲೂ ನಡೆದಿತ್ತು ಅಮ್ಮಾವರ ಕಾರಭಾರು !

I I I

# ಗುರುದಕ್ಷಿಣೆ

ಧೌಮ್ಯಋಷಿಗಳಿಗೆ ಮೂರು ಜನ ಶಿಷ್ಯರು - ಉಪಮನ್ಯು, ಆರುಣಿ, ಬೈದ. ಈ ಮೂವರೂ ಶಿಷ್ಯರು ಗುರುಕುಲದ ಕಷ್ಟಕಾರ್ಪಣ್ಯಗಳನ್ನೆಲ್ಲ ಸಹಿಸಿ, ಗುರು ಶುಶ್ರೂಷೆ ಮಾಡಿ, ಗುರುಗಳ ಎಲ್ಲ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಗುರುಗಳ ಪೂರ್ಣಾನುಗ್ರಹದಿಂದ ಶ್ರೇಷ್ಠಜ್ಞಾನಿಗಳಾದವರು.

ಗುರುಕುಲವಾಸ ಮುಗಿದ ಬಳಿಕ ಬೈದನೂ ತನ್ನ ಮನೆಯಲ್ಲಿ ಮೂವರು ಶಿಷ್ಯರನ್ನು ಇಟ್ಟುಕೊಂಡು ಅವರಿಗೆ ಅಶನವಸನಗಳ ಏರ್ಪಾಡುಮಾಡಿ ಗುರುಗಳಿಂದ ಪಡೆದ ಎಲ್ಲ ಜ್ಞಾನವನ್ನು ಧಾರೆಯೆರೆದನು. ಬೈದ ಆ ಶಿಷ್ಯರಿಗೆ ಎಂದೂ ಯಾವ ಕೆಲಸವನ್ನೂ ಮಾಡಲು ಹೇಳುತ್ತಿರಲಿಲ್ಲ. ಬಾಲ್ಯದಲ್ಲಿ ಗುರುಕುಲದ ಕಷ್ಟ ದುಃಖಗಳ ಅನುಭವವಿದ್ದ ಬೈದ ತನ್ನ ಶಿಷ್ಯರಿಗೆ ಯಾವ ಕಷ್ಟವನ್ನೂ ಕೊಡದೇ ಪ್ರೀತಿ ವಾತ್ಸಲ್ಯಗಳಿಂದ ಅನ್ನ ವಿದ್ಯೆಗಳನ್ನಿತ್ತು ಅವರನ್ನು ಪೋಷಿಸಿದ. ಬೈದ ಎಂದೂ ಶಿಷ್ಯರನ್ನು ಬೈದವನಲ್ಲ.

ಉತ್ತಂಕ ಬೈದ ಮುನಿಯ ಶಿಷ್ಯ. ಪ್ರೀತಿವಾತ್ಸಲ್ಯಗಳ ತಂಪುನೆರಳಿನಲ್ಲಿ ಬೆಳೆದ ಉತ್ತಂಕನಿಗೆ ಗುರುಗಳಲ್ಲಿ ತುಂಬ ಪ್ರೀತಿ, ಗೌರವ. ಗುರುಕುಲವಾಸ ಮುಗಿಸಿದ ಉತ್ತಂಕ, ಗುರುಗಳಲ್ಲಿ ಬಂದು, ''ವಿದ್ಯಾಭ್ಯಾಸ ಮುಗಿಸಿ ಹೊರಟಿದ್ದೇನೆ. ಗುರು ದಕ್ಷಿಣೆ ಕೊಡಬೇಕು ಎಂದಿದ್ದೇನೆ. ತಮ್ಮ ಅಪೇಕ್ಷೆಯನ್ನು ತಿಳಿಸಬೇಕು'' ಎಂದನು. ' ಯಾವುದೇ ಪ್ರತಿಫಲವನ್ನೂ ಬಯಸದೇ ನಿನಗೆ ಜ್ಞಾನೋಪದೇಶಗೈದಿರುವೆ. ಆದುದರಿಂದ ಯಾವ ಗುರುದಕ್ಷಿಣೆಯೂ ಬೇಡ '', ಎಂದರು ಗುರುಗಳು. ಆದರೆ ಉತ್ತಂಕ ಬಹಳ ಒತ್ತಾಯಿಸಿದ. ಉತ್ತಂಕನ ಒತ್ತಾಯಕ್ಕೆ ಮಣಿದು ಗುರುಗಳು ತನ್ನ ಪತ್ನಿಯಲ್ಲಿ ಹೋಗಿ ವಿಚಾರಿಸಲು ಹೇಳಿದರು. ಗುರುಪತ್ನಿಯು- '' ಉತ್ತಂಕ ! ಪೌಷ್ಯ ರಾಜನ ಪತ್ನಿಯು ಧರಿಸಿರುವ ಎರಡು ಕರ್ಣಕುಂಡಲಗಳನ್ನು ತಂದುಕೊಡು. ಇಂದಿನಿಂದ ನಾಲ್ಕನೆದಿನದಲ್ಲಿ ಅದನ್ನು ತರಬೇಕು. ಅಂದು ಮನೆಯಲ್ಲಿ ಧಾರ್ಮಿಕ ಸಮಾರಂಭ ಇದೆ. ಆಗ ನಾನು ಆ ಕುಂಡಲ ಧರಿಸಿ ಬ್ರಾಹ್ಮಣರಿಗೆ

ವಿದ್ವಾಂಸರಿಗೆ ಬಡಿಸಬೇಕು. ಈ ನನ್ನ ಬಯಕೆಯನ್ನು ಈಡೇರಿಸಿದರೆ ನಿನಗೆ ಶ್ರೇಯಸ್ಸಿದೆ. ಇಲ್ಲದಿದ್ದರೆ ಎಲ್ಲಿಯ ಶ್ರೇಯಸ್ಸು?'' ಎಂದಳು.

ಪೌಷ್ಯರಾಜನ ಪತ್ನಿಯು ಧರಿಸಿರುವ ಕುಂಡಲಗಳನ್ನು ತರಲು ಉತ್ತಂಕ ಹೊರಟನು. ದಾರಿಯಲ್ಲಿ ಒಂದು ಎತ್ತು; ಅದರ ಮೇಲೊಬ್ಬ ಪುರುಷ. ಉತ್ತಂಕನನ್ನು ಕಂಡು ಆ ಪುರುಷನು - ''ಉತ್ತಂಕ ! ಈ ಎತ್ತಿನ ಮಲ ಮೂತ್ರಗಳನ್ನು ಸ್ವೀಕರಿಸು. ವಿಚಾರಮಾಡಬೇಡ. ನಿನ್ನ ಗುರುಗಳೂ ಇದನ್ನು ಸ್ವೀಕರಿಸಿದ್ದಾರೆ'' ಎಂದನು. 'ಗುರುಗಳು ಸ್ವೀಕರಿಸಿದ ಮೇಲೆ ನನಗೇನು ಚಿಂತೆ' ಎಂದು ಭಾವಿಸಿ ಉತ್ತಂಕ ಆ ಎತ್ತಿನ ಮಲ ಮೂತ್ರಗಳನ್ನು ಸ್ವೀಕರಿಸಿ, ಆಚಮನಮಾಡಲು ಮರೆತು ಮುಂದೆ ಸಾಗಿದನು.

ಪೌಷ್ಯರಾಜನ ಭೇಟಿಯಾಗಿದೆ.''ಸ್ವಾಗತ! ಏನು ಬೇಕು'' - ಪೌಷ್ಯಮಹಾರಾಜ ಆದರದಿಂದಲೇ ಉತ್ತಂಕನನ್ನು ಕೇಳಿದ. ''ನಿಮ್ಮ ಪತ್ನಿಯು ಧರಿಸಿದ ಕುಂಡಲಗಳನ್ನು, ನಮ್ಮ ಗುರುಪತ್ನಿಗೆ ಗುರುದಕ್ಷಿಣೆಯಾಗಿ ಕೊಡಬೇಕಾಗಿದೆ. ಆದುದರಿಂದ ಆ ಕುಂಡಲಗಳು ಬೇಕು.'' - ಉತ್ತಂಕನಿಂದ ಬೇಡಿಕೆ.

''ಅಂತಃಪುರದಲ್ಲಿ ರಾಣಿ ಇದ್ದಾಳೆ. ಹೋಗಿ ಕೇಳಿ ಪಡೆಯಿರಿ''. ಪೌಷ್ಯನ ಮಾತಿನಂತೆ ಉತ್ತಂಕನು ರಾಣಿಯ ಅಂತಃಪುರಕ್ಕೆ ಪ್ರವೇಶಿಸಿದನು. ಆದರೆ ಅಲ್ಲಿ ರಾಣಿ ಕಾಣಲಿಲ್ಲ. ಉತ್ತಂಕನಿಗೆ ಸ್ವಲ್ಪ ಕೋಪಬಂತು. ''ಏಕೆ ಸುಳ್ಳು ಹೇಳಿ ವಂಚನೆ ಮಾಡುತ್ತಿರುವಿ ? ಅಂತಃಪುರದಲ್ಲಿ ರಾಣಿಯೇ ಇಲ್ಲ''.

''ಉತ್ತಂಕ! ತಾವು ಅಶುಚಿಯಾಗಿದ್ದೀರಿ, ಅಶುಚಿಯಾದವರಿಗೆ ಪತಿವ್ರತೆಯಾದ ಆಕೆ ಹೇಗೆ ಕಾಣಸಿಗುವಳು? ಸ್ವಲ್ಪ ನೆನಪಿಸಿಕೊಳ್ಳಿ, ಹೇಗೆ ಅಶುಚಿ ಆಗಿದ್ದೀರಿ ಎಂದು''.

''ಹೌದು ರಾಜನ್! ದಾರಿಯಲ್ಲಿ ಎತ್ತಿನ ಮಲ ಮೂತ್ರ ತಿಂದು ಕುಡಿದ ಮೇಲೆ ಆಚಮನ ಮಾಡಲಿಲ್ಲ. ಅವಸರದಲ್ಲಿ ಮರೆತೆ. ಆಚಮನ ಮಾಡಿ ಶುದ್ಧನಾಗಿ ಬರುತ್ತೇನೆ.



ಚೆನ್ನಾಗಿ ಕೈಕಾಲುಮುಖಗಳನ್ನು ತೊಳೆದು ಪೂರ್ವಕ್ಕೆ ಮುಖಮಾಡಿ, ನೊರೆಯಿಲ್ಲದ, ಬಿಸಿಯಿಲ್ಲದ, ಶುದ್ಧವಾದ ನೀರನ್ನು ಶಬ್ದಮಾಡದೇ ಹೃದಯದವರೆಗೆ ಆ ನೀರು ಹೋಗುವಂತೆ ಮೂರು ಬಾರಿ ಆಚಮನ ಮಾಡಿದನು ಉತ್ತಂಕ.

ಆಚಮನ ಮಾಡಿ ಶುದ್ಧನಾಗಿ ಅಂತಃಪುರಕ್ಕೆ ಹೋದರೆ - ರಾಣಿ ಪ್ರತ್ಯಕ್ಷ. ನಮಸ್ಕಾರಪೂರ್ವಕ ಆದರದಿಂದ ಬರಮಾಡಿಕೊಂಡ ರಾಣಿಯಲ್ಲಿ ತನ್ನ ಬಯಕೆಯನ್ನು ವ್ಯಕ್ತಪಡಿಸಿದ. ಇಂತಹ ಸತ್ಪಾತ್ರ ಸಿಗುವುದು ಕಷ್ಟ. ಸಿಕ್ಕಾಗ

ಸುಮ್ಮನೇ ಕಳಿಸಬಾರದು ಎಂದು ಭಾವಿಸಿದ ರಾಣಿ ಕೂಡಲೇ ಸಂತೋಷದಿಂದ ಆ ಕುಂಡಲಗಳನ್ನು ಕೊಟ್ಟಳು. ''ಉತ್ತಂಕ! ತೆಗೆದುಕೋ ಕುಂಡಲಗಳನ್ನು; ಆದರೆ ಜೋಕೆ !ತಕ್ಷಕನೆಂಬ ನಾಗರಾಜನು ಇದನ್ನು ತುಂಬ ಬಯಸುತ್ತಿರುವನು, ಅಪ್ರಮತ್ತನಾಗಿ ಒಯ್ಯಬೇಕು.''

''ಯೋಚನೆ ಬೇಡ, ಆ ತಕ್ಷಕ ನನ್ನಿಂದ ಇವುಗಳನ್ನು ಕಸಿಯಲು ಸಾಧ್ಯವಿಲ್ಲ. ಅವನಿಗೆಲ್ಲಿ ಬರಬೇಕು ಅಷ್ಟು ಸಾಮರ್ಥ್ಯ.''

''ಉತ್ತಂಕ! ನಿನ್ನಂತಹ ಸತ್ಪಾತ್ರನಾದ ಗುಣವಂತನಾದ ಯೋಗ್ಯ ಅತಿಥಿ ದೊರೆಯುವುದು ದುರ್ಲಭ. ನೀನಾಗಿಯೇ ಬಂದಿರುವಿ. ದಯವಿಟ್ಟು ಭೋಜನ ಮಾಡಿಕೊಂಡು ಹೋಗಬೇಕು.'' ಎಂದನು ರಾಜ.

''ರಾಜನ್! ಆಗಲಿ. ಆದರೆ ಬೇಗ ವ್ಯವಸ್ಥೆ ಆಗಬೇಕು.'' ಕೂಡಲೇ ರಾಜನು ಊಟಮಾಡಿಸಿದ್ದಾನೆ.

''ರಾಜನ್! ನೀನು ಕುರುಡನಾಗುವಿ, ನೀನು ಬಡಿಸಿದ ಅನ್ನದಲ್ಲಿ ಕೂದಲಿವೆ. ಅಲ್ಲದೆ ಅನ್ನವೂ ತಣ್ಣಗಿದೆ. ಇಂತಹ ಅಶುಚಿಯಾದ ಅನ್ನವನ್ನು ಅತಿಥಿಗೆ ಉಣಬಡಿಸುವುದು ಉಚಿತವೇ?''

'' ಉತ್ತಂಕ ! ನಾನು ನಿರ್ದುಷ್ಟವಾದ ಅನ್ನವನ್ನೇ ಬಡಿಸಿದ್ದೇನೆ. ನಿರ್ದುಷ್ಟವಾದ ಅನ್ನವನ್ನು ನಿಂದಿಸಿದ ನಿನಗೆ ಮಕ್ಕಳಾಗದಿರಲಿ ''.

'' ಇದೇನು ರಾಜಾ ! ತಪ್ಪು ಮಾಡಿ, ಅದನ್ನು ಒಪ್ಪಿಕೊಳ್ಳುವುದು ಬಿಟ್ಟು ನನಗೇ ಶಾಪಕೊಡುವಿಯಲ್ಲ. ಇದು ಸರಿಯೇ ? ಬಂದು ನೋಡು. ಅನ್ನ ಶುದ್ಧವೋ ಅಶುದ್ಧವೋ. ''

'' ಆರ್ಯ ಉತ್ತಂಕ! ಕ್ಷಮಿಸಿ, ನೋಡದೇ ಮಾತನಾಡಿದೆ. ಅಜ್ಞಾನದಿಂದ ಈ ಪ್ರಮಾದ ನಡೆದಿದೆ. ಬಡಿಸುವಾಕೆ ತಲೆಕೂದಲು ಕಟ್ಟಿಕೊಳ್ಳದೇ ಬಡಿಸಿದ್ದಾಳೆ ಮನ್ನಿಸು.''

" ರಾಜನ್ ! ನಾನು ಹೇಳಿದ್ದು ಇನ್ನು ಸುಳ್ಳಾಗಲು ಸಾಧ್ಯವಿಲ್ಲ. ಆದರೆ ಸ್ವಲ್ಪ ಸಮಯದಲ್ಲಿಯೇ ನಿನಗೆ ಶಾಪವಿಮೋಚನೆಯಾಗುವುದು. "

" ವಿಚಾರಮಾಡದೇ ನೀನಿತ್ತ ಶಾಪವನ್ನು ನೀನೂ ಹಿಂತೆಗೆದುಕೋ. "

" ಕೊಟ್ಟ ಶಾಪ ಹಿಂತೆಗೆಯಲು ಮನೋನೈರ್ಮಲ್ಯಬೇಕು. ನನಗಿನ್ನೂ ಕೋಪ ಶಾಂತವಾಗಿಲ್ಲ. ಮನಸ್ಸು ನಿರ್ಮಲವಾಗಿಲ್ಲ. ಆದುದರಿಂದ ಹಿಂತೆಗೆದುಕೊಳ್ಳುವ ಶಕ್ತಿ ನನಗಿಲ್ಲ. ಬ್ರಾಹ್ಮಣರ ಮನಸ್ಸು ಬೆಣ್ಣೆಯಂತೆ. ಮಾತು ತೀಕ್ಷ್ಣವಾದ ಚೂರಿಯಂತೆ. ಕ್ಷತ್ರಿಯರ ಮಾತು ಮಧುರ. ಹೃದಯ ಕಠೋರ - ಎಂಬ ವಿಚಾರ ನಿಮಗೆ ತಿಳಿಯದ ವಿಚಾರವಲ್ಲ ".

" ಚಿಂತೆಬೇಡ ರಾಜ. ಅದುಷ್ಟವಾದ ಅನ್ನವನ್ನು ನಿಂದಿಸಿದ್ದರಿಂದ ನನಗೆ ಮಕ್ಕಳಾಗದಿರಲೆಂದು ನೀನು ಕೊಟ್ಟ ಶಾಪ. ಆದರೆ ನಾನು ದುಷ್ಟವಾದ ಅನ್ನವನ್ನೇ ನಿಂದಿಸಿದ್ದರಿಂದ ನನಗೆ ಆ ಶಾಪ ಅಂಟುವುದಿಲ್ಲ. ಇರಲಿ, ನಾನು ಬರುತ್ತೇನೆ. " ಉತ್ತರಿಸಿದ ಉತ್ತಂಕ.

ದಾರಿಯಲ್ಲೊಬ್ಬ ದಿಗಂಬರ. ಒಮ್ಮೆ ಕಾಣುತ್ತಾನೆ. ಕೂಡಲೇ ಮಾಯವಾಗುತ್ತಾನೆ. ವಿಚಿತ್ರ. ನೆಲದಲ್ಲಿ ಕುಂಡಲಗಳನ್ನಿಟ್ಟು ಆಹ್ನಿಕಕ್ಕೆ ನೀರು ಹುಡುಕುತ್ತ ಹೊರಟನು ಉತ್ತಂಕ. ಆ ದಿಗಂಬರ ಈ ಕುಂಡಲ ತೆಗೆದುಕೊಂಡು ಓಡಿಹೋದ. ಆಹ್ನಿಕ ಮುಗಿಸಿದ ಉತ್ತಂಕ ಅಟ್ಟಿಸಿಕೊಂಡು ಹೊರಟ. ಇನ್ನೇನು ಹಿಡಿಯಬೇಕು ಎನ್ನುವಷ್ಟರಲ್ಲಿ ಹಾವಾಗಿ ಬಿಲ ಸೇರಿದ. ತಕ್ಷಣವೇ ಆ ದಿಗಂಬರ!

ಉತ್ತಂಕ ಮರದಕಡ್ಡಿ ಹಿಡಿದು ಆ ಬಿಲವನ್ನು ಕೆತ್ತಿದನು. ಇವನ ಈ ಶ್ರಮವನ್ನು ಗಮನಿಸಿದ ಇಂದ್ರ ಅನುಕಂಪೆಯಿಂದ ತನ್ನ ವಜ್ರಾಯುಧಕ್ಕೆ ಅಪ್ಪಣೆ ಮಾಡಿದ. "ಹೋಗಿ ಉತ್ತಂಕನಿಗೆ ಸಹಾಯಮಾಡು".

ವಜ್ರಾಯುಧ ಆ ಕಡ್ಡಿಯೊಳಗೆ ಸನ್ನಿಹಿತವಾಯಿತು. ಬಿಲವನ್ನು ಭೇದಿಸಿ ಉತ್ತಂಕ ಒಳಹೋದ. ನಾಗಲೋಕವನ್ನು ಸೇರಿದ. ಎಲ್ಲ ನಾಗಗಳನ್ನು ಪ್ರಾರ್ಥನೆ ಮಾಡಿದ. ಆದರೂ ಕುಂಡಲ ದೊರೆಯಲಿಲ್ಲ.

ಇದೇ ಸಂದರ್ಭದಲ್ಲಿ ಅವನೊಂದು ವಿಚಿತ್ರ ದೃಶ್ಯ ಕಂಡ. ಇಬ್ಬರು ಯುವತಿಯರು ದಾರ ಹಿಡಿದು ಬಟ್ಟೆ ನೇಯುತ್ತಿದ್ದಾರೆ. ಅದರಲ್ಲಿ ಕಪ್ಪು ಬಿಳುಪಿನ ನೂಲುಗಳು. ಅಲ್ಲೊಂದು ಚಕ್ರ. ಅದಕ್ಕೆ 12 ಅರಗಳು. ಆರು ಕುಮಾರರು ಅದನ್ನು ತಿರುಗಿಸುತ್ತಿದ್ದಾರೆ. ಅವರ ಸಮೀಪದಲ್ಲಿಯೇ ಒಬ್ಬ ಪುರುಷ ಮತ್ತು ಒಂದು ಕುದುರೆ.

ಆ ಪುರುಷನನ್ನು ಉತ್ತಂಕ ಸ್ತೋತ್ರಮಾಡಿದ.

" ಏನು ಬೇಕು ಉತ್ತಂಕ? "

" ತಕ್ಷಕ !ಕುಂಡಲಗಳನ್ನು ಅಪಹರಿಸಿದ್ದಾನೆ. ಅದನ್ನು ದೊರಕಿಸಿಕೊಡಬೇಕು."

"ಹಾಗಾದರೆ ಒಂದು ಕೆಲಸ ಮಾಡು. ಈ ಕುದುರೆಯ ನವದ್ವಾರಗಳಲ್ಲಿ ಒಂದು ಕಡೆ ಜೋರಾಗಿ ಗಾಳಿ ಊದು.".

ಕೂಡಲೇ ಆ ಕುದುರೆಯ ಎಲ್ಲ ದ್ವಾರಗಳಿಂದ ಬೆಂಕಿಯ ಜ್ವಾಲೆಗಳು ಹೊರ-ಹೊಮ್ಮಿದವು. ವಿಷಣ್ಣನಾದ ತಕ್ಷಕ ಓಡಿಬಂದ. ಕುಂಡಲಕೊಟ್ಟ.

"ಗುರುಕುಲ ಬಿಟ್ಟು ಬಹಳ ಸಮಯವಾಯಿತು. ಅವರು ಹೇಳಿದ ಗಡುವು ಮುಗಿಯುತ್ತಬಂತು. ಬಹಳ ದೂರ ಬಂದಿದ್ದೇನೆ. ಹಿಂತಿರುಗುವುದು ಹೇಗೆ?" ಚಿಂತಿಸಿದ ಉತ್ತಂಕ.

" ಉತ್ತಂಕ ! ಬೇಡ ಆತಂಕ. ಏರು ಈ ಕುದುರೆಯನ್ನು. "

" ಗಡುವು ಮುಗಿದರೂ ಉತ್ತಂಕ ಬರಲಿಲ್ಲ. ಇನ್ನು ಸಹಿಸಲು ಸಾಧ್ಯವಿಲ್ಲ. ಶಾಪವೇ ಗತಿ ಇವನಿಗೆ.' ಎಂದು ಭಾವಿಸಿದಳು ಗುರು ಪತ್ನಿ.

ಅಷ್ಟರಲ್ಲಿ " ಗುರುಪತ್ನಿಗೆ ಪ್ರಣಾಮ, ತೆಗೆದುಕೊಳ್ಳಿ, ನೀವು ಬಯಸಿದ ಕುಂಡಲವನ್ನು" ಎಂದ ಉತ್ತಂಕ.

" ಉತ್ತಂಕ ಸರಿಯಾದ ಸಮಯಕ್ಕೆ ಬಂದಿರುವಿ. ಸ್ವಲ್ಪ ತಡವಾಗಿದ್ದರೂ ಶಾಪ ಕೊಡಬೇಕೆಂದಿದ್ದೆ."

" ಏಕಿಷ್ಟು ತಡ ಉತ್ತಂಕ? "

" ಪೂಜ್ಯರೇ ! ದಾರಿಯಲ್ಲಿ ತಕ್ಷಕ ಕುಂಡಲಗಳನ್ನು ಅಪಹರಿಸಿದ. ನಾಗಲೋಕಕ್ಕೆ ಹೋಗಿ ಅದನ್ನು ಹಿಂದೆ ಪಡೆಯಬೇಕಾದರೆ ತಡವಾಯಿತು. ಕ್ಷಮಿಸಿಬೇಕು ಗುರುಗಳೇ ! ಪ್ರಯಾಣದಲ್ಲಿ ವಿಚಿತ್ರ ಅನುಭವವಾಯಿತು. ದಾರಿಯಲ್ಲಿ ಒಬ್ಬ ಪುರುಷ, ಎತ್ತಿನ ಮಲ ಮೂತ್ರ ಕುಡಿಸಿದ. ನೀವೂ ಕುಡಿದಿದ್ದೀರಿ ಎಂದ. ನಾಗ ಲೋಕದಲ್ಲಂತೂ ಮತ್ತೂ ವಿಚಿತ್ರ ದೃಶ್ಯ ಕಂಡೆ.

ಆ ಚಕ್ರ ಯಾವುದು ? ಆ ಯುವತಿಯರು ಯಾರು ! ಆ ಆರು ಕುಮಾರರು ಯಾರು ? ಆ ಚಕ್ರದ ಆ ಹನ್ನೆರಡು ಅರಗಳು ಏನು ? ಆ ಪುರುಷ, ಕುದುರೆ ಯಾರು ? ಆ ಕಪ್ಪು ಬಿಳಿ ನೂಲುಗಳೇನು ?

"ಪ್ರಿಯ ಉತ್ತಂಕ, ! ಧಾತ್ರೀ-ವಿಧಾತ್ರಿ ಎನ್ನುವವರೇ ಆ ಯುವತಿಯರು. ಹಗಲು ರಾತ್ರಿಗಳೇ ಆ ಕಪ್ಪು-ಬಿಳಿ ನೂಲುಗಳು. ಆ ಚಕ್ರ-ಸಂವತ್ಸರ. 12 ತಿಂಗಳುಗಳೇ ಅದರ ನಡುವಿದ್ದ 12 ಅರಗಳು. ಆರು ಋತುಗಳೇ ಆ ಆರು ಕುಮಾರರು. ಆ ಪುರುಷ ಪರ್ಜನ್ಯದೇವತೆ. ಆ ಕುದುರೆ-ಅಗ್ನಿ, ಆ ಎತ್ತು ಐರಾವತ, ಅದರ ಮೇಲಿದ್ದ ಪುರುಷ ಇಂದ್ರ. ನೀನು ತಿಂದ ಆ ಮಲ ಮೂತ್ರಗಳು, ಅಮೃತ. ಆ ಅಮೃತಪಾನ ಮಾಡಿದ್ದರಿಂದಲೇ ನಾಗಲೋಕದಲ್ಲಿಯೂ ನೀನು ಮೃತನಾಗಲಿಲ್ಲ. ನನ್ನ ಸ್ನೇಹಿತನಾದ ಇಂದ್ರ ನಿನಗೆ ಅಮೃತಪಾನ ಮಾಡಿಸಿದ. ಆದುದರಿಂದಲೇ ಕುಂಡಲ ಮತ್ತೆ ಪಡೆದು ಬರಲು ಸಾಧ್ಯವಾಯಿತು.

ನಿನ್ನ ಗುರುಭಕ್ತಿಗೆ ಮೆಚ್ಚಿದ್ದೇನೆ. ನಿನಗೆ ಸಕಲವಿಧ ಶ್ರೇಯಸ್ಸು ದೊರೆಯುತ್ತದೆ. ನೀನಿನ್ನು ಮನೆಗೆ ಹೋಗಬಹುದು."

" ಆಗಲಿ ಗುರುಗಳೇ"

ಗುರುಗಳಿಗೆ ನಮಿಸಿದ ಉತ್ತಂಕ ತನಗೆ ತೊಂದರೆಕೊಟ್ಟ ತಕ್ಷಕನಿಗೆ ಸರಿಯಾದ ಪ್ರತೀಕಾರಮಾಡಬೇಕೆಂದು ಕೋಪದಿಂದ ಮುಂದೆ ಹಸ್ತಿನಾಪುರಕ್ಕೆ ಹೊರಟ.

ಒಬ್ಬ ಪವಿತ್ರಳಾದ ಪತಿವ್ರತೆಯನ್ನು ನೋಡಲು ಉತ್ತಂಕನಿಗೆ ಆಚಮನ ಮಾಡದಿದ್ದುದರಿಂದ ಸಾಧ್ಯವಾಗಲಿಲ್ಲ. ಅಪವಿತ್ರತಮರಾದ ನಮಗೆ, ಪವಿತ್ರ ವಸ್ತುಗಳಿಗೂ ಪಾವಿತ್ರ್ಯ ನೀಡುವ ಆ ಭಗವಂತನು ಕಾಣುವುದು ಹೇಗೆ? ನಮ್ಮ ಅಪಾವಿತ್ರ್ಯದಿಂದಾಗಿ ಭಗವಂತನನ್ನು ಕಾಣುವ ಅರ್ಹತೆಯನ್ನೇ ಕಳೆದುಕೊಂಡಿರುವ ನಾವು, ಕಣ್ಣಿಗೆ ಕಾಣದಿರುವುದರಿಂದ ಭಗವಂತನೇ ಇಲ್ಲ ಎನ್ನುತ್ತೇವೆ. ಎಷ್ಟು ವಿಚಿತ್ರ !

ಬಿಸಿಲಿನಲ್ಲಿ ಹೋಗಿ ಒಳಗೆ ಬಂದಾಗ ಮನೆಯಲ್ಲಿಯ ಪದಾರ್ಥಗಳಾವುವೂ ಕಾಣುವುದಿಲ್ಲ. ಅಂತಯೇ ಪ್ರಾಪಂಚಿಕ ಪದಾರ್ಥಗಳ ಪ್ರಖರ ಹೊಳಪಿನಲ್ಲಿ ನಮ್ಮ ದೃಷ್ಟಿ ಮಂದವಾಗಿದೆ. ಅದರಿಂದಾಗಿ ಭಗವಂತ ಕಾಣುವುದಿಲ್ಲ.

ಉತ್ತಂಕನ ಕಥೆ ನಮಗೆಲ್ಲ ಸಂಬಂಧಿಸುವಂಥದು. ನಾವೂ ಕುಂಡಲಗಳನ್ನು ಸಂಪಾದಿಸಬೇಕು. ವೇದಮಾತೆಯ ತತ್ತ್ವಜ್ಞಾನವೆಂಬ ಕುಂಡಲವನ್ನು ಪಡೆಯಬೇಕು. ಕುಂಡಲವನ್ನು ಪಡೆಯುವಾಗ ತಕ್ಷಕನಿಂದ ಅಡ್ಡಿಯಾದಂತೆ ಇತರ ಮತಗಳೆಂಬ ತಕ್ಷಕನಿಂದ ತಡೆಯುಂಟಾಗುತ್ತದೆ. ಭ್ರಾಂತಿಯಿಂದಾಗಿ ನಮ್ಮ ತತ್ತ್ವಜ್ಞಾನವೆಂಬ ಕುಂಡಲ ನಾಶವಾಗುವುದು. ಉತ್ತಂಕ ಇಂದ್ರನಿಂದ ಅಮೃತಪಡೆದಂತೆ ಗುರುಗಳ ಮೂಲಕ ಉಪದೇಶಾಮೃತ ಪಡೆದರೆ ಈ ಭ್ರಾಂತಿಯ ತೊಂದರೆ ಪರಿಹಾರ. ಕಡ್ಡಿಯಿಂದ ಭೂಮಿಯನ್ನು ಕೆದರಿ ಪಾತಾಳ ಸೇರಿದಂತೆ ಯುಕ್ತಿಯೆಂಬ ಕಡ್ಡಿಯಿಂದ ಮನನ ಮಾಡಿದಾಗ ಆಳವಾದ ಅಧ್ಯಯನ ಸಾಧ್ಯ. ತತ್ತ್ವಜ್ಞಾನ ಲಭ್ಯ. ಇಂದ್ರನ ವಜ್ರಾಯುಧದ ಪ್ರವೇಶದಿಂದ ಆ ಕಡ್ಡಿಗೆ ಬಲ ಬಂದಂತೆ ಶ್ರುತಿ ಪ್ರತ್ಯಕ್ಷಗಳ ಬೆಂಬಲದಿಂದ ಯುಕ್ತಿಗೆ ಶಕ್ತಿ-ಬಲ. ಹೀಗೆ ತತ್ತ್ವಜ್ಞಾನವೆಂಬ ಕುಂಡಲವನ್ನು ಶ್ರವಣ-ಮನನಗಳಿಂದ ಪಡೆಯಬಹುದು. ತತ್ತ್ವಜ್ಞಾನವನ್ನು ಪಡೆಯಲು ಯಾವರೀತಿ ಪ್ರಯತ್ನಪಡಬೇಕೆನ್ನುವುದನ್ನು ಈ ಕಥೆ ನಮಗೆ ತಿಳಿಸಿಕೊಡುವುದು.



# ಅನ್ನವಿಕ್ಕದ ಯಜ್ಞ ಫಲಿಸದು

ಶ್ವೇತರಾಜನು ದೊಡ್ಡ ಯಜ್ಞವನ್ನು ನೆರವೇರಿಸಿದ್ದನು. ಅದರ ಅಂಗವಾಗಿ ಅನ್ನದಾನ ಮಾಡಿರಲಿಲ್ಲ. ಅದರ ಪರಿಣಾಮವಾಗಿ ಶ್ವೇತರಾಜನಿಗೆ ವಿಪರೀತ ಹಸಿವೆಯಾಯಿತು. ತನ್ನ ದೇಹದ ಮಾಂಸವನ್ನೇ ತಿಂದು ಹಸಿವು ನಿವಾರಿಸಿಕೊಳ್ಳುವ ಹಂತಕ್ಕೆ ತಲುಪಿದನು. ಏನಾದರೂ ಹಸಿವೆ ನೀಗದೇ ಇರಲು ಚತುರ್ಮುಖ ಬ್ರಹ್ಮ ದೇವರಲ್ಲಿ, 'ಹಸಿವೆ ಹೋಗಲು ಏನು ಮಾಡಲಿ' - ಎಂದು ಕೇಳಿಕೊಂಡನು. ಬ್ರಹ್ಮ ದೇವನು ದಿವ್ಯಮಾಲೆಯೊಂದನ್ನು ನೀಡಿ, " ಇದರ ಸ್ಪರ್ಶ ಮಾಡು. ಅದರಿಂದ ನಿನ್ನ ಹಸಿವು ಹಿಂಗುವುದು. ಬಳಿಕ ಈ ಮಾಲೆಯನ್ನು ರಾಮದೇವರಿಗೆ ತಲುಪಿಸುವಂತೆ ಹೇಳಿ ಅಗಸ್ತ್ಯರಿಗೆ ಕೊಡು" ಎಂದರು. ಅಂತೆಯೇ ಆ ಮಾಲೆಯ ಸ್ಪರ್ಶದಿಂದ ಹಸಿವೆ ಪರಿಹರಿಸಿಕೊಂಡು ಅಗಸ್ತ್ಯರಿಗೆ ಕೊಟ್ಟು ರಾಮದೇವರಿಗೆ ಸಮರ್ಪಿಸುವಂತೆ ನಿವೇದಿಸಿಕೊಂಡನು.

ಅಯೋಧ್ಯಾನಗರದ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದ ಶ್ರೀರಾಮಚಂದ್ರ ಒಮ್ಮೆ ಅಗಸ್ತ್ಯರ ಆಶ್ರಮಕ್ಕೆ ದಯಮಾಡಿಸಿದನು. ಆಗ ಅಗಸ್ತ್ಯರು ಶ್ವೇತರಾಜನಿಂದ ಕೊಡಲ್ಪಟ್ಟ ಮಾಲೆಯನ್ನು ಶ್ರೀರಾಮನಿಗೆ ಸಮರ್ಪಿಸಿದರು.

ಬ್ರಹ್ಮದೇವರು ಶ್ವೇತನಿಗೆ ಮಾಲೆಯನ್ನು ಕೊಟ್ಟು " ರಾಮನಿಗೆ ಕೊಡುವಂತೆ ಹೇಳಿ ಅಗಸ್ತ್ಯರಿಗೆ ಕೊಡು " ಎಂದದ್ದೇಕೆ ? ಶ್ವೇತರಾಜನಿಗೇ, ರಾಮನಿಗೆ ಕೊಡುವಂತೆ ತಿಳಿಸಬಹುದಿತ್ತಲ್ಲ? ಎಂಬ ಸಂದೇಹಕ್ಕೆ ಆಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಉತ್ತರಿಸುವರು -

ಶ್ರೀರಾಮಚಂದ್ರನಲ್ಲಿ ಸಾಕ್ಷಾತ್ತಾಗಿ ಏನನ್ನಾದರೂ, ಸಮರ್ಪಿಸಿದರೆ ಅದು ಹಸಿವೆಯ ಪರಿಹಾರ ರೂಪವಾದ ಫಲವನ್ನಷ್ಟೇ ನೀಡುವುದಿಲ್ಲ. ಸತ್ಪಾತ್ರದಾನದ ಮಹಿಮೆಯಿಂದಾಗಿ ಅದಕ್ಕೂ ಹೆಚ್ಚಿನ ಫಲ ನೀಡುವುದು. ಪ್ರಕೃತ ಶ್ವೇತರಾಜ ಬ್ರಹ್ಮದೇವರಲ್ಲಿ ' ಹಸಿವೆ ಪರಿಹಾರವಾಗ'ಲೆಂದಷ್ಟೇ ಕೇಳಿಕೊಂಡಿರುವುದು

ತಾನೆ? ಆದರಿಂದಾಗಿ ಬ್ರಹ್ಮದೇವರು ಅಗಸ್ತ್ಯರ ಮೂಲಕ ಶ್ರೀರಾಮನಿಗೆ ಅರ್ಪಿಸುವಂತೆ ಹೇಳಿದರು.

ಕಾಮ್ಯಫಲವನ್ನು ಬಯಸಿದವರಿಗೆ ದೇವರು ಕರುಣೆ ತೋರಿ ಹೆಚ್ಚಿನ ಫಲ ಕೊಡುವುದಿಲ್ಲ. ಐಹಿಕ ಫಲದ ಆಕಾಂಕ್ಷೆ ಭಗವಂತನ ಕರುಣೆಗೆ ಪ್ರತಿಬಂಧಕ.

ಯಾವುದೇ ರೀತಿಯ ಭಗವದಾರಾಧನಾರೂಪವಾದ ಯಜ್ಞ (ಸತ್ಕಾರ್ಯ) ವನ್ನು ಮಾಡುವಾಗಲೂ ಅನ್ನದಾನವನ್ನು ಅವಶ್ಯ ಮಾಡಬೇಕು. ಇಲ್ಲದಿದ್ದರೆ ಪುಣ್ಯ ಕರ್ಮ ಮಾಡಿದ್ದರೂ ಹಸಿವೆಯ ಬಾಧೆ ತಟ್ಟುತ್ತದೆ. ಆದರಿಂದಲೇ ವಿಶೇಷವಾದ ಭಗವಂತನ ಆರಾಧನೆಗಳು ನಡೆದಾಗ ಅನ್ನದಾನ ಮಾಡುವ ಸಂಪ್ರದಾಯ ನಮ್ಮಲ್ಲಿ ಬಂದಿರುವುದು.

ಭಗವಂತನಲ್ಲಿ ಐಹಿಕ ಫಲವನ್ನು ಕೇಳಿದರೆ ಅದು ಮಾತ್ರ ದೊರೆತು ಭಗವಂತ ದೂರವಾಗುತ್ತಾನೆ. ಅವನ ಕರುಣೆ ನಮಗಾಗುವುದಿಲ್ಲ. ಆದುದರಿಂದ ಐಹಿಕ ಫಲಕಾಮನೆ ನಿಷಿದ್ಧ. ಐಹಿಕವನ್ನು ಕೇಳಿ, ಭಗವಂತನ ಕೃಪೆಯಿಂದ ಸಿಗಬಹುದಾದ ದೊಡ್ಡ ಲಾಭವನ್ನು ಕಳೆದುಕೊಳ್ಳುವ ಮೂರ್ಖರು ನಾವಾಗಬಾರದು.



# ಛತ್ರಿ-ಪಾದುಕಾ ಪುರಾಣ

ಋಚೀಕ ಮಹರ್ಷಿಗೆ ಗಾಧಿರಾಜ ಪುತ್ರಿ ಸತ್ಯವತಿಯಲ್ಲಿ ಅಶ್ವತ್ಥವೃಕ್ಷ ಸೇವೆಯಿಂದ ಜನಿಸಿದ ಪುತ್ರ ಜಮದಗ್ನಿ. '(ಜಾ) ಜಮದ್ ' ಎಂದರೆ ದೇವತೆಗಳು. ದೇವತೆಗಳು ಮತ್ತು ಅಗ್ನಿಯನ್ನು ಹೊಂದಿದವನಾದ್ದರಿಂದ ಜಮದಗ್ನಿ ಎಂಬ ಅನ್ವರ್ಥ ನಾಮ ಅವನಿಗೆ. ಚಿತ್ರರಥನೆಂಬ ಗಂಧರ್ವನಲ್ಲಿ ಅನುರಕ್ತಳಾಗಿ ಮಗ ಪರಶುರಾಮನಿಂದಲೇ ತಲೆ ಉರುಳಿಸಿಕೊಂಡ ಅಯೋನಿಜೆ ರೇಣುಕೆ ಜಮದಗ್ನಿಯ ಪತ್ನಿ.

ಬ್ರಾಹ್ಮಣನಾದರೂ ಒಳ್ಳೆಯ ಬಿಲ್ಲುಗಾರ ಜಮದಗ್ನಿ. ಒಂದು ದಿನ ಗಂಡ ಹೆಂಡಿರಲ್ಲಿ ವಿಚಿತ್ರವಾದ ಆಟವೊಂದು ನಡೆದಿತ್ತು - ಜಮದಗ್ನಿ ಬಿಲ್ಲಿಗೆ ಹೆದೆಯೇರಿಸಿ ಬಾಣ ಬಿಡುವನು. ದೂರ ಬಿದ್ದ ಅದನ್ನು ಮತ್ತೆ ಮತ್ತೆ ಹೆಕ್ಕಿ ತರುವ ಕೆಲಸ ಪತ್ನಿಗೆ. ಉರಿಬಿಸಿಲಾದರೂ ಈ ಆಟ ಮುಂದುವರಿದಿತ್ತು. ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟ. ಉರಿಬಿಸಿಲಲ್ಲಿ ಬರಿಕಾಲಲ್ಲಿ ನಡೆಯಲಾರದೆ ಬಾಣ ತರಲು ಹೋದ ರೇಣುಕೆ ಮರದಡಿಯಲ್ಲಿ ಸ್ವಲ್ಪ ವಿಶ್ರಮಿಸಿದಳು. ಹೆದರುತ್ತಲೇ ಪತಿಯೆಡೆಗೆ ಬಂದಳು, ಮೈ ಬೆವರಿತ್ತು. ಜಮದಗ್ನಿ ಕೋಪದ ಕಿಡಿಯಾದ. ನಡುಗುತ್ತಲೇ ಕಾರಣ ತಿಳಿಸಿದಳು- " ನಾಥ, ಬಿಸಿಲ ಬೇಗೆ, ತಲೆ, ಕಾಲು ಎರಡೂ ಸುಟ್ಟಿತು. ನೆರಳಲ್ಲಿ ಸ್ವಲ್ಪ ವಿಶ್ರಮಿಸಿದೆ, ಕ್ಷಮಿಸಿ ".

ಈಗ ಋಷಿಯ ಸಿಟ್ಟು, ಸೂರ್ಯನತ್ತ ತಿರುಗಿತ್ತು. ಹೂಡಿದ ಬಾಣಕ್ಕೆ ಗುರಿ ಸೂರ್ಯನಾದ. ಅವನನ್ನು ಉರುಳಿಸಿ ಬಿಡಲು ಋಷಿಯ ಸನ್ನಾಹ. ಹೆದರಿದ ಸೂರ್ಯ ಬ್ರಾಹ್ಮಣ ವೇಷದಿಂದ ಬಂದ. ಋಷಿಯನ್ನು ಕೇಳಿದ- ವಿಪ್ರರ್ಷೆ, ಜಗತ್ತಿಗೆ ಪ್ರಾಣಭೂತ ಸೂರ್ಯ. ಅವನನ್ನೇ ಉರುಳಿಸಿದರೆ ಜಗತ್ತಿನ ಗತಿಯೇನು? ಋಷಿಯ ನಿರ್ಧಾರ ಬದಲಾಗಲಿಲ್ಲ. ಆಗ ಮತ್ತೊಂದು ಪ್ರಶ್ನೆ ಕೇಳಿದ ಸೂರ್ಯ- ಸ್ವಾಮಿ, ವೇಗವಾದ ಗತಿಶೀಲ ಸೂರ್ಯ. ಚಲವಾದ ಈ ಗುರಿಯನ್ನು ತಮ್ಮ ಬಾಣ ಮುಟ್ಟುವುದಾದರೂ ಹೇಗೆ ? ' ಬ್ರಾಹ್ಮಣ, ಸೂರ್ಯ ಯಾವಾಗ ಸ್ಥಿರ ಯಾವಾಗ ಚಲನೆಂದು ನನ್ನ ಜ್ಞಾನ ದೃಷ್ಟಿ ತಿಳಿದಿದೆ. ಮಧ್ಯಾಹ್ನ ಅರ್ಧ ನಿಮೇಷ

ಕಾಲ ಅವನು ಸ್ಥಿರನಾಗಿರುತ್ತಾನೆ. ಆಗ ಹೂಡುತ್ತೇನೆ ಬಾಣ'. ಸೂರ್ಯ ನಡುಗಿದ. ಶರಣಾದ. ಋಷಿಯ ಕೋಪ ಇಳಿಯಿತು. ಸೂರ್ಯ ತನ್ನ ತಾಪವನ್ನು ತಡೆಯಲು ಅನುಕೂಲವಾಗುವಂತೆ ಛತ್ರವನ್ನೂ ಕಾಲಿಗೆ ಚರ್ಮದ ಪಾದುಕೆಯನ್ನೂ ಕೊಟ್ಟ. ಗಂಡ ಹೆಂಡಿರ ಆಟ ಸುಗಮವಾಗಿ ನಡೆಯಿತು.



ಹೀಗೆ ' ಉಪಾನಹೌ ಚ ಛತ್ರಂ ಚ ಸೂರ್ಯೇಣೈವ ಪ್ರವರ್ತಿತಂ'- ಚಪ್ಪಲಿ ಮತ್ತು ಛತ್ರಿಯ ಯುಗ ಆರಂಭಗೊಂಡಿದ್ದು ಸೂರ್ಯನಿಂದ. ಅಪ್ಪರಿಂದ ಉರಿ ಬಿಸಿಲ ಬೇಸಿಗೆಯಲ್ಲಿ ಎಣ್ಣೆ ಹಚ್ಚಿ ಮೃದುವಾದ ಚರ್ಮದ ಪಾದುಕೆ ಮತ್ತು ಛತ್ರಿಯನ್ನು ದಾನವಿತ್ತರೆ ಸೂರ್ಯದೇವ ಪ್ರೀತನಾಗುವ.

★ ★ ★

# ಲಕ್ಷ್ಮಿಯ ಒಲುಮೆ ಯಾರಿಗೆ ?

ಗಂಗೆಯ ಪವಿತ್ರ ಪರಿಸರ. ಸೂರ್ಯೋದಯದ ಮಂಗಳ ಪ್ರಭಾತ. ದೇವರ್ಷಿ ನಾರದರು, ದೇವೇಂದ್ರ-ಗಂಗಾತೀರದಲ್ಲಿ. ಸೂರ್ಯನ ಮಂಜುಳ ಪ್ರಭೆಯನ್ನು ಮಸುಕುಗೊಳಿಸುವಂಥ ತೇಜಸ್ವಿನೀ ಸಾಧ್ವಿಯ ಆವಿರ್ಭಾವ. ಕಣ್ಣು ಕುಕ್ಕಿಸುವ ಮೈಕಾಂತಿಯ ಆ ಚೆಲುವೆ-ಜಗನ್ಮಾತೆ ಮಹಾಲಕ್ಷ್ಮೀ.



'ದೇವಿ ! ಯಾರು ನೀನು ? ಎಲ್ಲಿಂದ ಆಗಮನ ! ಏನು ಆಗಮನದ ನಿಮಿತ್ತ? ಮತ್ತೆಲ್ಲಿಗೆ ಪ್ರಯಾಣ ?' - ಸಮುಚಿತ ಸತ್ಕಾರದ ನಂತರ ಶಕ್ರನ ಪ್ರಶ್ನೆ " ಮೂರು ಲೋಕಗಳಲ್ಲಿ ಎಲ್ಲ ಸ್ಥಾವರ ಜಂಗಮ ಜೀವಜಾತ ನನ್ನ ಪ್ರಸಾದ ಸಂಜಾತ. ನನ್ನ ಅನುಗ್ರಹದ ಅಪೇಕ್ಷೆ, ನಿರೀಕ್ಷೆಗಾಗಿಯೇ ಎಲ್ಲರ ಸಾಧನೆ, ಭಾವನೆಗಳು. ಸೂರ್ಯಾಂತರ್ಗತ ಶ್ರೀಹರಿಯ ಪ್ರಭೆಯಿಂದ ಅರಳುವ ಪದ್ಮದಲ್ಲಿ ನನ್ನ ಪ್ರಾದುರ್ಭಾವ. ಲಕ್ಷ್ಮಿ, ಶ್ರೀ, ಭೂತಿ, ಶ್ರದ್ಧಾ, ಮೇಧಾ, ಸನ್ನತಿ, ವಿಜಿತಿ, ಸ್ಥಿತಿ, ಧೃತಿ, ಸಿದ್ಧಿ, ಸಂಭೂತಿ, ಸ್ವಾಹಾ, ಸ್ವಧಾ, ಸಂಸ್ತುತಿ, ನಿಯತಿ, ಕೃತಿ ಎಲ್ಲವೂ ನಾನೇ;

ನನ್ನಿಂದಲೆ. ಜಯಸಂಪಾದಿಸುವ ರಾಜರ ರಥದ ಧ್ವಜದ ತುದಿಯಲ್ಲಿ, ಸ್ವಧರ್ಮಾಸಕ್ತರ ಹೃದಯದಲ್ಲಿ, ಶ್ರೀಹರಿಭಕ್ತರಲ್ಲಿ ನನ್ನ ವಾಸ. ಇದುವರೆಗೆ ಅಸುರರಲ್ಲಿ ವಾಸ. ಇನ್ನು ನಿನ್ನಲ್ಲಿ ವಾಸ. ಅಸುರರ ಪರಿತ್ಯಾಗ.'ಲಕ್ಷ್ಮಿಯ ಉತ್ತರ.

ಸಂತಸಗೊಂಡ ಶಕ್ರನಿಗೆ ಮತ್ತೆ ಜಿಜ್ಞಾಸೆ - " ಇದುವರೆಗೆ ಅಸುರರಲ್ಲಿ ವಾಸ ಮಾಡಲು ಕಾರಣ ? ಈಗ ಅವರನ್ನು ಬಿಡಲು ಕಾರಣವೇನು ? ನಮ್ಮಲ್ಲಿ ವಾಸ ಮಾಡಲು ಅಂಥ ಗುಣ ಏನಿದೆ ?

ದೇವೇಂದ್ರನ ಪ್ರಶ್ನೆಮಾಲೆಗೆ ದೇವಿಯ ಸಮಾಧಾನ-"ಧರ್ಮಾಸಕ್ತರಲ್ಲಿ ನನ್ನ ವಾಸ. ಅಸುರರೂ ಕೂಡ ಕೆಲವು ಕಾಲ ಧಾರ್ಮಿಕರಾಗಿದ್ದರು. ದಾನ, ಅಧ್ಯಯನ, ಯಜ್ಞ, ಪಿತೃ-ದೈವತ ಸತ್ಕಾರ, ಗುರು, ಅತಿಥಿ ಪೂಜೆ ಎಲ್ಲವೂ ನಡೆದಿದ್ದವು. ಮಕ್ಕಳ, ಹೆಂಗಸರ, ಅಮಾತ್ಯರ, ಭೃತ್ಯರ ಪೋಷಣೆಯಾಗುತ್ತಿತ್ತು. ಅಸೂಯೆ, ಅಸಹನೆಗಳು ಇರಲಿಲ್ಲ. ಎಲ್ಲ ಸನ್ಮಾನಗಳಲ್ಲಿ ಅರ್ಹತೆಯೇ ಪ್ರಮುಖ ಆಧಾರ ವಾಗಿತ್ತು. ಸೂರ್ಯಾಸ್ತ ಉದಯಗಳಲ್ಲಿ ಮಲಗುತ್ತಿರಲಿಲ್ಲ. ಉಪವಾಸ ವ್ರತ ತಪೋನುಷ್ಠಾನ ಮಾಡುತ್ತಿದ್ದರು. ಕೃಪಣರಲ್ಲಿ, ಅನಾಥರಲ್ಲಿ, ದುರ್ಬಲರಲ್ಲಿ, ರೋಗಿಗಳಲ್ಲಿ, ಹೆಂಗಸರಲ್ಲಿ ಎಲ್ಲರೂ ದಯೆ ತೋರುತ್ತಿದ್ದರು. ಹಿಂಸೆ, ಕ್ರೌರ್ಯಗಳು ನಡೆಯುತ್ತಿರಲಿಲ್ಲ. ಈ ಕಾರಣಕ್ಕಾಗಿ ಅವರಲ್ಲಿ ವಾಸ ಮಾಡುತ್ತಿದ್ದೆ.

ಕಾಲಚಕ್ರ ಉರುಳಿದಂತೆ ಈ ಧರ್ಮಪ್ರವೃತ್ತಿ ನಶಿಸತೊಡಗಿತು. ಎಲ್ಲರೂ ಕಾಮಕ್ರೋಧ ವಶರಾದರು. ಸಭೆಗಳಲ್ಲಿ ಕಿರಿಯರು ಹಿರಿಯರ ಮಾತಿಗೆ ಬೆಲೆ ಕೊಡಲಿಲ್ಲ. ಹಿರಿಯರು ಎದುರಿಗೆ ಬಂದರೂ ಕುಳಿತ ಯುವಕರು ಎದ್ದು ನಿಂತು ಗೌರವಿಸಲಿಲ್ಲ. ಮನೆಯಲ್ಲಿ ತಂದೆತಾಯಿಗಳು ಇರುವಾಗಲೆ ಅವರನ್ನು ತಿರಸ್ಕರಿಸಿ ಮಕ್ಕಳು ಅಧಿಕಾರ ನಡೆಸುತ್ತಿದ್ದರು. ತಾಯಿ, ತಂದೆ, ವೃದ್ಧರು, ಆಚಾರ್ಯ, ಅತಿಥಿ, ಗುರು-ಇವರುಗಳನ್ನು ನಮಿಸುತ್ತಿರಲಿಲ್ಲ. ಮಕ್ಕಳನ್ನು ಪ್ರೀತಿಯಿಂದ ಪಾಲನೆ ಮಾಡುತ್ತಿರಲಿಲ್ಲ. ವೈಶ್ವದೇವ, ಬಲಿಹರಣ ಮಾಡದೆ, ಭಿಕ್ಷಾ ಹಾಕದೆ ರುಚಿ ರುಚಿಯಾಗಿ ಅಡಿಗೆ ಮಾಡಿಕೊಂಡು ತಾವೇ ತಿನ್ನುತ್ತಿದ್ದರು. ಬಾಹ್ಯ, ಆಂತರ ಶೌಚವಿರಲಿಲ್ಲ. ರಾತ್ರಿಯಲ್ಲಿ ಮೊಸರು, ಹಿಟ್ಟುಗಳನ್ನು ತಿನ್ನುತ್ತಿದ್ದರು, ಕರು ಹಾಕಿದ ಹತ್ತು ದಿನದ ಒಳಗೆಯೇ ಹಸುವಿನ ಹಾಲನ್ನು ಕುಡಿಯುತ್ತಿದ್ದರು. ಕರುವಿಗೆ

ಬಿಡದೆ ಪೂರ್ತಿ ಹಾಲು ಕರೆಯುತ್ತಿದ್ದರು. ಹೆಂಡತಿಯನ್ನು ಬೈಯ್ಯುವುದು, ಹೊಡೆಯುವುದು, ಶಾಪ ಹಾಕುವುದು ಹೀಗೆಲ್ಲ ನಡೆಯುತ್ತಿತ್ತು. ಶೂದ್ರರ ಅನ್ನವನ್ನು ಬ್ರಾಹ್ಮಣರು ಕಣ್ಮುಚ್ಚಿ ತಿನ್ನುತ್ತಿದ್ದರು. ಮನೆಯಲ್ಲಿ ಬೆಕ್ಕು, ನಾಯಿ, ಕೋಳಿಗಳನ್ನು ಸಾಕಿಕೊಂಡು ಅದರೊಂದಿಗೆ ಆಡುತ್ತಿದ್ದರು. ರಾತ್ರಿಯಲ್ಲಿ ಎಳ್ಳು ತಿನ್ನುತ್ತಿದ್ದರು. ಎಣ್ಣೆಯನ್ನು ಹಚ್ಚಿಕೊಂಡು ಮಲಗುವರು. ದೇವರ ಸ್ತೋತ್ರ, ಪೂಜೆ, ಮೊದಲಾದವುಗಳನ್ನು ದ್ವೇಷಿಸುವರು ; ಮಾಡುವವರನ್ನು ದೂಷಿಸುವರು. ಮನೆಯಲ್ಲಿ ಹೋಮಧೂಮವಿಲ್ಲ, ವೇದಘೋಷ ಮೊದಲೇ ಇಲ್ಲ. ವಿಷ್ಣುವನ್ನು ಆರಾಧನೆ ಮಾಡುವುದು ಬಿಟ್ಟು ಪಾಷಂಡಮತವನ್ನು ಅವಲಂಬಿಸಿದರು. ಶಾಸ್ತ್ರಗಳ ಅಧ್ಯಯನವಿಲ್ಲ ; ತಿಳುವಳಿಕೆಯಿಲ್ಲ. ಸಂಪಾದಿಸುವುದು, ತಿನ್ನುವುದು-ಎರಡೇ ಕೆಲಸ ; ದೇವರ ಸೊತ್ತು , ಬ್ರಾಹ್ಮಣರ ಸೊತ್ತು ಎಲ್ಲವನ್ನೂ ಕಬಳಿಸುವರು.

ಇನ್ನು ಹೆಂಗಸರು, ಗೃಹಿಣಿಯ ಧರ್ಮವನ್ನೆಲ್ಲ ಗಾಳಿಗೆ ತೂರಿದರು. ಮನೆಯಲ್ಲಿ ಎಲ್ಲೆಂದಲ್ಲಿ ಧಾನ್ಯಗಳು ಚೆಲ್ಲಾಪಿಲ್ಲಿಯಾಗಿರುತ್ತಿದ್ದವು. ಕಾಗೆಗಳು, ಇಲಿಗಳು ಮುಂತಾದ ಕ್ರಿಮಿಕೀಟಗಳು ಧಾನ್ಯಾಧಿವಾಸ ಮಾಡಿದ್ದವು. ಅಡಿಗೆ ಪದಾರ್ಥಗಳನ್ನು, ಹಾಲು ಮೊಸರು, ತುಪ್ಪ ಮೊದಲಾದುವುಗಳನ್ನು ಮುಚ್ಚಿಡುತ್ತಿರಲಿಲ್ಲ. ಚಪ್ಪಲಿ, ಒನಕೆ, ಹಾರೆ, ಪರಕೆ, ಕೊಡಲಿ-ಮೊದಲಾದುವುಗಳನ್ನು ಒಪ್ಪ ಓರಣವಾಗಿ, ಎದುರಿಗೆ ಕಾಣದಂತೆ ಜೋಡಿಸುತ್ತಿರಲಿಲ್ಲ. ಪಾತ್ರೆಗಳನ್ನು ದ್ರವ್ಯಗಳನ್ನು ಧೂಳು ಬೀಳದಂತೆ ಸಂರಕ್ಷಣೆ ಮಾಡುತ್ತಿರಲಿಲ್ಲ. ಎರಡೂ ಕೈಗಳಿಂದ ತಲೆಕೆದರಿಕೊಂಡು, ಹೇನುಗಳನ್ನು ತೆಗೆಯುತ್ತ ಮನೆಯ ಮುಂಭಾಗದಲ್ಲಿ ಕುಳಿತು ಕೊಳ್ಳುವರು. ಮನೆಯ ಮೂಲೆಗಳಲ್ಲಿ ಒಲೆಗಳು ದಟ್ಟವಾಗಿದ್ದವು. ಅತ್ತೆ, ಮಾವಂದಿರ ಎದುರಿಗೆ ಲಜ್ಜೆ, ಸಂಕೋಚಗಳಿಲ್ಲದೆ ಗಂಡನನ್ನು ಬೈಯುವುದು. ಅದು ಮಾಡಿ, ಇದು ಮಾಡಿ ಎಂದು ಆದೇಶಿಸುವುದು ಎಲ್ಲ ನಡೆಯುತ್ತಿತ್ತು. ಹಟ್ಟಿಯಲ್ಲಿರುತ್ತಿದ್ದ ಹಸುಗಳಿಗೆ ಹೊತ್ತು, ಹೊತ್ತಿಗೆ ಹುಲ್ಲು, ನೀರುಗಳನ್ನು ಕೊಡುತ್ತಿರಲಿಲ್ಲ. ಮಕ್ಕಳು ಹಸಿದು ಅಳುತ್ತಿದ್ದರೆ ಅವರೆದುರಿಗೆ ಅವರಿಗೆ ಕೊಡದೆ ತಾವೇ ತಿಂಡಿಗಳನ್ನು ತಿನ್ನುತ್ತಿದ್ದರು. ಭೃತ್ಯರಿಗೆ ಸರಿಯಾಗಿ ಹೊಟ್ಟೆಗೆ ಹಾಕದೆ ತಾನು ರುಚಿಕರವಾದ

ಭಕ್ಷ್ಯ, ಭೋಜ್ಯಗಳನ್ನು ಮಾಡಿಕೊಂಡು ತಿನ್ನುತ್ತಿದ್ದರು. ಸೂರ್ಯೋದಯವಾದರೂ ಏಳುತ್ತಿರಲಿಲ್ಲ. ಸೂರ್ಯಾಸ್ತವಾದರೂ ಮಲಗುತ್ತಿದ್ದರು. ದಿನ ಬೆಳಗಾದರೆ ಗಂಡ, ಹೆಂಡತಿ ಜಗಳವೋ ಜಗಳ. ಯುವತಿಯರು ನಾಭಿ ಕಾಣುವಂತೆ ಸೀರೆ, ಸ್ತನಗಳು ತೋರುವಂತೆ ಕುಪ್ಪಸ ಧರಿಸುತ್ತಿದ್ದರು. ಈ ಬಗೆಯ ಪ್ರದರ್ಶನದಲ್ಲಿ ಸಂತಸಕಾಣುತ್ತಿದ್ದರು. ಹೆಂಗಸರು ಪುರುಷರ ಉಡುಗೆ, ತೆಡುಗೆಗಳನ್ನು, ಪುರುಷರು ಸ್ತ್ರೀಯರ ಉಡುಗೆ, ತೊಡುಗೆಗಳನ್ನು ಹಾಕುತ್ತಿದ್ದರು, ಕ್ರೀಡೆಯಲ್ಲಿ ಅತಿಯಾದ ಆಸಕ್ತಿ ತೋರುತ್ತಾ ಕಾಲ ಕಳೆಯುತ್ತಿದ್ದರು. ಕ್ರೀಡೆ, ರತಿ, ವಿಹಾರಗಳಲ್ಲಿ ಸ್ತ್ರೀ ಪುರುಷರು ಕಲೆತು ಆನಂದ ಪಡುತ್ತಿದ್ದರು.

ಕೆಲವರಲ್ಲಿ ಅಧ್ಯಯನವಿದೆ ; ಅನುಷ್ಠಾನವಿಲ್ಲ. ಕೆಲವರಲ್ಲಿ ಅನುಷ್ಠಾನವಿದೆ; ಅಧ್ಯಯನವಿಲ್ಲ. ಗುರುಶುಶ್ರೂಷೆ ಮಾಡದ ಶಿಷ್ಯ. ಶಿಷ್ಯನೊಂದಿಗೆ ಗೆಳೆಯನಂತೆ ವರ್ತಿಸುವ ಗುರು. ತಾಯಿ ತಂದೆಗಳು ಮನೆಯಲ್ಲಿ ತಮ್ಮ ಮಾತು ನಡೆಯದೆ ಮಕ್ಕಳಲ್ಲಿ ಅನ್ನ ಬೇಡುತ್ತ ಕಾಯುತ್ತ ಕೂಡುವರು. ವೇದ ಶಾಸ್ತ್ರಗಳನ್ನು ಬಲ್ಲವರು ಕೃಷಿಯಲ್ಲಿ ಆಸಕ್ತರು. ಮೂರ್ಖರು ಶ್ರಾದ್ಧಕ್ಕೆ ಬಂದು ಉಣ್ಣುವರು. ಎಲ್ಲರೂ ಕೃತಘ್ನರು. ನಾಸ್ತಿಕರು. ನಿಷಿದ್ಧವಾದ ಪದಾರ್ಥಗಳನ್ನು ತಿನ್ನುವರು. ಕುಡಿಯ ಬಾರದನ್ನು ಕುಡಿಯುವರು. ಹೀಗೆ ಧರ್ಮಸೀಮೆಯನ್ನು ಮೀರಿ ನಡೆಯುವ ಅಸುರರಲ್ಲಿ ವಾಸ ಮಾಡಲು ಇಚ್ಛೆ ಇಲ್ಲದೆ ಸಾತ್ವಿಕರಾದ ನಿಮ್ಮಲ್ಲಿಗೆ ಬಂದಿದ್ದೇನೆ. ನಾನೆಲ್ಲಿಯೋ ಅಲ್ಲಿಯೇ ನನ್ನ ಪತಿ ನಾರಾಯಣನೂ. ನಾನಿದ್ದಲ್ಲಿಯೇ ಆಶಾ, ಶ್ರದ್ಧಾ, ಧೃತಿ, ಕ್ಷಾಂತಿ, ವಿಜಿತಿ, ಸನ್ನತಿ, ಕ್ಷಮಾ ಎಲ್ಲರೂ ವಾಸ ಮಾಡುವರು. ಗೌರವದಿಂದ ಬರಮಾಡಿಕೋ, ಎಲ್ಲ ದೇವತೆಗಳಿಗೆ ಒಳಿತಾಗಲಿ.

ಬಯಸಿದರೂ ಬಾರದ ಲಕ್ಷ್ಮಿ ತಾನಾಗಿ ಒಲಿದು ಬಂದುದನ್ನು ಕಂಡು ಇಂದ್ರ ಸಂತೋಷಪಟ್ಟ. ನಾರದರೂ ಹರ್ಷಗೊಂಡರು. ಎಲ್ಲ ದೇವತೆಗಳೂ ವೈಭವದ ಮೆರವಣಿಗೆಯಲ್ಲಿ ಲಕ್ಷ್ಮೀದೇವಿಯನ್ನು ಬರಮಾಡಿಕೊಂಡರು. ಭಕ್ತಿಪೂರ್ಣವಾದ, ಸ್ವಾಗತವನ್ನು ಲಕ್ಷ್ಮೀದೇವಿ ಸ್ವೀಕರಿಸಿದಳು. ಮಹಾಭಾರತದ ಶಾಂತಿ ಪರ್ವದಲ್ಲಿ ಬರುವ ಈ ಕಥಾಭಾಗವನ್ನು ಪಠಿಸಿದವರಿಗೆ ಸಿರಿ ಒಲಿಯುವಳು.

## ಜಾಣ ಇಲಿ

ಬಹಳ ಕಷ್ಟದಲ್ಲಿರುವಾಗ, ಅದರಿಂದ ಪಾರಾಗ ಬೇಕಾದರೆ ಕೆಲವೊಮ್ಮೆ ಶತ್ರುಗಳ ಜೊತೆಗೂ ಸ್ನೇಹ ಬೆಳೆಸಿಕೊಳ್ಳಬೇಕಾಗುತ್ತದೆ. ಆದರೆ ಎಷ್ಟೇ ಸ್ನೇಹವಿದ್ದರೂ, ಸ್ವಾಭಾವಿಕವಾಗಿ ಅವರು ಶತ್ರುಗಳು ಎನ್ನುವ ಎಚ್ಚರಿಕೆಯೂ ಇರಬೇಕು. ಶತ್ರುಗಳಿಂದು ಆಪತ್ಕಾಲದಲ್ಲಿ ಅವರು ಮಾಡಿದ ಉಪಕಾರಗಳನ್ನು ಮರೆತು ಅವರಿಗೆ ಒಪ್ಪಂದದಂತೆ ಸಹಾಯ ಮಾಡದಿರಬಾರದು. ಆದರೆ ಅವರಿಗೆ ಸಹಾಯ ಮಾಡುವ ಅವಸರದಲ್ಲಿ ನಮಗೆ ಹಾನಿ ಮಾಡಿಕೊಳ್ಳಬಾರದು. ಹೀಗೆ ಶತ್ರುವೊಂದಿಗೆ ಸಂಧಾನ ಮಾಡಿಕೊಂಡು, ಅವರಿಗೆ ಸಹಾಯವನ್ನು ಮಾಡಿಯೂ ಜಾಣತನದಿಂದ ತನ್ನನ್ನು ಉಳಿಸಿಕೊಂಡ ಇಲಿಯ ಕಥೆ ಓದಿ -

ಅದೊಂದು ದಟ್ಟವಾದ ಅರಣ್ಯ. ಅದರಲ್ಲಿ ವಿಶಾಲವಾದ ಒಂದು ನ್ಯಗ್ರೋಧವೃಕ್ಷ. ಅದರ ಬುಡದಲ್ಲಿ ದೊಡ್ಡ ಬಿಲ. ಅದರಲ್ಲಿ ಒಂದು ಜಾಣ ಇಲಿ. ಅದರ ಹೆಸರು " ಪಲಿತ". ಆ ವೃಕ್ಷದ ಕೊಂಬೆಯಲ್ಲಿ ವಂಚನೆ ಬುದ್ಧಿಯ ಬೆಕ್ಕೊಂದು. ಅದರ ಹೆಸರು " ಲೋಮಶ ". ಅವೆರಡೂ ಅಲ್ಲಿ ಬಹಳ ಕಾಲದಿಂದ ವಾಸ ಮಾಡುತ್ತಿದ್ದವು.

ಅವನೊಬ್ಬ ಬೇಡ. ಕ್ರೌರ್ಯ, ನಿಷ್ಕರುಣೆಗಳ ಸಾಕಾರಮೂರ್ತಿ. ಅವನ ನೆರಳೂ, ಕಾಡಿನ ಪ್ರಾಣಿಗಳಿಗೆ ಭಯಂಕರ. ಆ ನ್ಯಗ್ರೋಧ ವೃಕ್ಷದ ಬುಡದಲ್ಲಿ ದೊಡ್ಡ ಬಲೆಯನ್ನು ಕಟ್ಟುವುದು, ಅದರಲ್ಲಿ ಪ್ರಾಣಿಗಳಿಗೆ ಆಮಿಷ ತೋರಲು ಮಾಂಸದ ತುಂಡನ್ನು ಸಿಕ್ಕಿಸುವುದು, ರಾತ್ರಿ ಸುಖ ನಿದ್ರೆ ಮನೆಯಲ್ಲಿ. ಬೆಳಿಗ್ಗೆ ಬಲೆಯಲ್ಲಿ ಸಿಕ್ಕಿ ಬಿದ್ದಿರುವ ಪಕ್ಷಿ, ಮೃಗಗಳನ್ನು ಒಯ್ಯುವುದು- ಆ ಬೇಡನ ದಿನಚರಿ.

ಇಲಿಯಿಂದ ಆಹಾರ ಅನ್ವೇಷಣೆ, ಮಾಂಸ ತುಂಡಿನ ದರ್ಶನ, ಬಲೆಯ ಸಮೀಪಕ್ಕೆ ಆಗಮನ. ಇಲಿಗೆ ಪರಮ ಸಂತೋಷ, ಆಶ್ಚರ್ಯ !" ನನ್ನನ್ನು ತಿನ್ನುವ ನನ್ನ ಶತ್ರು

ಬೆಕ್ಕು, ಬೇಡನ ಬಲೆಗೆ ಬಲಿ. '' ಭಲೇ ! ಏನಯ್ಯಾ ಮಾರ್ಜಾರ ! ಲೋಮಶ ! ಆರೋಗ್ಯವೇ ?–ಇಲಿಯಿಂದ ಪರಿಹಾಸ. ಬಲೆಯ ಮೇಲೆ ಕುಳಿತು ಮಾಂಸ ಭಕ್ಷಣ.

ಇಲಿಗೆ ನಡುಕ ! ಪ್ರಾಣಭಯ ! ಇಲಿಯ ವಾಸನೆ ಹಿಡಿದು ಬಲೆಯ ಸಮೀಪಕ್ಕೆ, ನಾಲಿಗೆ ಚಾಚಿ ಭಯಂಕರವಾದ ಮುಂಗುಸಿ ಬರುತ್ತಿದೆ. ಹೆದರಿ ತಲೆಯೆತ್ತಿದರೆ ಮತ್ತೊಂದು ಆಪತ್ತು. ! ಮರದ ಮೇಲಿಂದ ಗೂಬೆಯೊಂದು ದುರುಗುಟ್ಟುತ್ತಿದೆ. ಇಳಿದು ಬರುತ್ತಿದೆ. ತನ್ನ ಶತ್ರು ಬಲೆಗೆ ಬಿದ್ದಿರುವನೆಂಬ ಸಂತೋಷದಿಂದ ಮಾಂಸವನ್ನು ಸವಿಯುತ್ತಿದ್ದ ಇಲಿಗೆ ಗಂಡಾಂತರ. ಎರಡು ಕಡೆಯಿಂದ ಮೃತ್ಯು. ಜೀವಭಯದಲ್ಲಿ ಬಾಯಿ ಒಣಗಿದೆ. ಕೈಕಾಲು ನಡುಗಿದೆ. ಹೃದಯ ಬಡಿತ ಹೆಚ್ಚಿದೆ. ಅನಿರೀಕ್ಷಿತ ಅಪಾಯ. ಊಹಾತೀತ ವೇದನೆ.



ಇಲಿಯ ಇಡೀ ದೇಹ ಸ್ತಬ್ಧವಾಗಿದ್ದರೂ ಮಿದುಳು ಸ್ತಬ್ಧವಾಗಿರಲಿಲ್ಲ. ಇಲಿ ವಿಚಾರ ಮಾಡಿತು – '' ಛೆ ! ನನ್ನಂತಹ ನೀತಿಶಾಸ್ತ್ರ ವಿಶಾರದನು ಆಪತ್ತಿಗೆ ಹೆದರಿ ಕಂಗಾಲಾಗುವುದೇ ? ಹೇಗಾದರೂ ಉಪಾಯದಿಂದ ಈ ಗೂಬೆ-ಮುಂಗುಸಿಗಳಿಂದ ಜೀವ ಉಳಿಸಿಕೊಳ್ಳುತ್ತೇನೆ. ಈಗ ನನಗಿರುವ ರಕ್ಷಕ ಎಂದರೆ ಈ ಬೆಕ್ಕೊಂದೇ.

ಅದು ಈಗ ಬಲೆಯಲ್ಲಿ ಸಿಲುಕಿದೆ. ಅದು ಬಲೆಯಿಂದ ಬಿಡುಗಡೆಯಾಗ ಬೇಕಾದರೆ ನನ್ನ ಸಹಾಯ ಅದಕ್ಕೆ ಬೇಕೇ ಬೇಕು. ಆದುದರಿಂದ ಈಗ ಈ ಬೆಕ್ಕಿನೊಂದಿಗೆ ಸಂಧಾನ ಮಾಡಿಕೊಳ್ಳಬೇಕು. ಆಪತ್ ಕಾಲದಲ್ಲಿ ಶತ್ರುಗಳನ್ನೂ ಸಂಧಾನ ಮಾಡಬೇಕು. ಮಿತ್ರನನ್ನೂ ಬಿಡಬೇಕು. ಇದು ಬುದ್ಧಿವಂತರ ಲಕ್ಷಣ. ಇದನ್ನು ಅರಿಯದವ ಎಷ್ಟು ಓದಿದ್ದರೂ ಮೂರ್ಖನೇ ಸರಿ ''.

'' ಪ್ರಿಯ ಮಾರ್ಜಾರ , ! ಕ್ರೂರವಾದ ಗೂಬೆ ಮತ್ತು ಮುಂಗುಸಿಗಳು ನನ್ನನ್ನು ತಿನ್ನಲು ಮುತ್ತಿಗೆ ಹಾಕಿವೆ. ಈಗ ನೀನೇ ನನಗೆ ಆಪದ್ಬಾಂಧವ. ನೀನೂ ಆಪತ್ತಿನಲ್ಲಿ ಸಿಲುಕಿರುವೆ. ಆತ್ಮರಕ್ಷಣೆಗಾಗಿ ಹೆಣಗಾಡುತ್ತಿರುವೆ. ನಾನೂ ಅಷ್ಟೇ. ನಾವಿಬ್ಬರೂ ಈಗ ಒಂದಾದರೆ ನಿನ್ನಿಂದ ನಾನು ರಕ್ಷಿತನಾಗುತ್ತೇನೆ. ನನ್ನಿಂದ ನೀನೂ ರಕ್ಷಿತನಾಗುವಿ. ವಿಚಾರ ಮಾಡು. ಒಪ್ಪಿದರೆ ನನ್ನನ್ನು ನೀನು ರಕ್ಷಣೆ ಮಾಡಬೇಕಾದ ಉಪಾಯವನ್ನೂ ವಿವರಿಸುತ್ತೇನೆ. '

ಬಲೆಗೆ ಸಿಕ್ಕಿ ಜೀವಭಯದಿಂದ ತತ್ತರಿಸಿದ್ದ ಬೆಕ್ಕಿಗೆ ಸಮಯಪ್ರಜ್ಞೆಯಿತ್ತು. ಇಲಿಯ ಪ್ರಾರ್ಥನೆಗೆ ಒಪ್ಪಿಗೆ ನೀಡಿತು.

ಮಾರ್ಜಾರದ ವಕ್ಷಸ್ಥಲವನ್ನು ಇಲಿ ಸೇರಿತು. ಶತ್ರುಗಳೂ ಪರಸ್ಪರ ಸಂಧಾನದಿಂದ ಒಟ್ಟಾದುದನ್ನು ಕಂಡು ಈ ಮುಂಗುಸಿ ಗೂಬೆಗಳು ನಿರಾಶೆಗೊಂಡು ಹೆದರಿ ಹೋದವು. ತಮ್ಮ ಮನೆ ಸೇರಿದವು.

ಬಂದ ಆಪತ್ತು ಪರಿಹಾರವಾಗಿ ಇಲಿ ನಿರಾಳವಾಗಿ ಉಸಿರಾಡಿತು. ತಾನು ಮಾಡಿಕೊಂಡ ಒಪ್ಪಂದದಂತೆ ಬೆಕ್ಕಿನ ಬಲೆಯನ್ನು ಕಡಿದು ಹಾಕಲು ಪ್ರಾರಂಭಿಸಿತು. ಜಾಣ ಇಲಿ ಬಹಳ ಎಚ್ಚರಿಕೆಯಿಂದ ನಿಧಾನವಾಗಿ ಕಡಿಯಲು ಉಪಕ್ರಮಿಸಿದಾಗ ಬೆಕ್ಕಿಗೆ ಆತಂಕ ! ಬೆಕ್ಕಿಗೆ ಆಟ ಇಲಿಗೆ ಪ್ರಾಣ ಸಂಕಟ ಎನ್ನುವ ಗಾದೆ ತಿರುವು ಮುರುವು. ಇಲಿ ಯಾವ ತಳಮಳವೂ ಇಲ್ಲದೇ ಸಾವಧಾನವಾಗಿ ಕಡಿಯುತ್ತಿದೆ. ಬೆಕ್ಕಿಗೆ ಬೇಡ ತನ್ನನ್ನು ಹಿಡಿಯುತ್ತಾನೆಂಬ ಭಯ.

ಇದೇನು ಮೂಷಿಕ ! ಪ್ರಾಣಭಯದಿಂದ ಹೆದರಿ ಕಂಗಾಲಾಗಿದ್ದೇನೆ. ಆದರೆ ನೀನು ಅವಸರಮಾಡದೇ ನಿಧಾನವಾಗಿ ಈ ಬಲೆಯನ್ನು ಕಡಿಯುತ್ತಿರುವಿ. ನಿನ್ನನ್ನು ರಕ್ಷಣೆ ಮಾಡಿದುದಕ್ಕೆ ನನಗೆ ಹೀಗೆ ಮಾಡುವುದೇ ?

ಆತಂಕದಿಂದ ಬೆಕ್ಕು ಗೋಗರೆದರೆ ಇಲಿ ಹೇಳಿತು - " ಮಾರ್ಜಾರ ! ಎಷ್ಟಾದರೂ ನೀನು ನನ್ನ ಶತ್ರು. ಆಗ ನನಗೆ ಆಪತ್ತು ಬಂದಿದ್ದಾಗ ನಾನು ಆತ್ಮ ರಕ್ಷಣೆಗೋಸ್ಕರ ನಿನ್ನ ಮಿತ್ರನಾದೆ. ಆದರೆ ಈಗ ನಾನು ನಿನ್ನನ್ನು ಬಿಡುಗಡೆಗೊಳಿಸಿದರೆ ಕೂಡಲೇ ನನ್ನನ್ನು ನೀನು ತಿಂದು ಹಾಕುವಿ. ಈ ಬಲೆಯಲ್ಲಿ ನೀನು ಸಿಕ್ಕಿಬಿದ್ದು ಬಹಳ ಸಮಯವಾಗಿದೆ. ಈಗ ನಿನಗೆ ತುಂಬ ಹಸಿವಾಗಿದೆ. ಆ ಬೇಡ ಬಂದ ಕೂಡಲೇ ನಿನ್ನನ್ನು ಬಿಡುತ್ತೇನೆ. ಆಗ ನಿನಗೆ ಆತ್ಮರಕ್ಷಣೆ ಮುಖ್ಯವಾಗಿರುತ್ತದೆ. ನನ್ನನ್ನು ತಿನ್ನಲು ಬರುವುದಿಲ್ಲ. ನಿನಗಿಂತಲೂ ಹೆಚ್ಚು ಬುದ್ಧಿ ನನಗೆ ಇದೆ. ಸಮಯ ಪ್ರಜ್ಞೆ ಇದೆ.

ಪ್ರಬಲರೊಡನೆ ಸಂಧಾನ ಮಾಡಿಕೊಳ್ಳುವಾಗ ಆತ್ಮರಕ್ಷಣೆಯ ಬಗ್ಗೆ ಎಚ್ಚರಿಕೆ ಅಗತ್ಯ.

ತೀರ ದಮನೀಯ ಸ್ಥಿತಿಯಲ್ಲಿದ್ದ ಬೆಕ್ಕು, " ಮಿತ್ರ ! ನೀನು ಆತಂಕಗೊಂಡಾಗ ನಾನು ಎಷ್ಟು ಅವಸರದಿಂದ ನಿನ್ನನ್ನು ಬಿಡುಗಡೆಗೊಳಿಸಿದೆ. ನೀನೂ ನನ್ನನ್ನು ಹಾಗೆಯೇ ಬಿಡುಗಡೆ ಗೊಳಿಸುವುದು ನ್ಯಾಯವಲ್ಲವೇ ? ಈ ಹಿಂದೆ ನಾನೇನಾದರೂ ತಿಳಿದೋ ತಿಳಿಯದೆಯೋ ದುಷ್ಕೃತ್ಯವನ್ನೆಸಗಿದ್ದರೆ ದಯವಿಟ್ಟು ಕ್ಷಮಿಸು. ಯಾವುದೋ ಹಿಂದಿನ ನನ್ನ ತಪ್ಪನ್ನು ಗಮನದಲ್ಲಿಟ್ಟು ಹೀಗೆ ಹಿಂಸೆ ಕೊಡುವುದು ಸರಿಯಲ್ಲ. ನನ್ನ ಬಗ್ಗೆ ವೃಥಾ ಸಂಶಯ ಪಡಬೇಡ. ಉಪಕಾರ ಮಾಡಿದ ನಿನ್ನನ್ನು ನಾನು ಹಿಂಸಿಸುತ್ತೇನೆಯೇ ?" ಎಂದು ಬೇಡಿ ಕೊಂಡಿತು.

ಬೆಕ್ಕಿನ ವಿನಂತಿಗೆ ಇಲಿಯ ಮನ ಕರಗಲಿಲ್ಲ. " ನೋಡು ಮಾರ್ಜಾರ ! ಈ ಲೋಕದಲ್ಲಿ ಯಾರೂ ಯಾರಿಗೂ ಮಿತ್ರರೂ ಅಲ್ಲ, ಶತ್ರುಗಳೂ ಅಲ್ಲ. ಅವರವರ ಸ್ವಾರ್ಥಕ್ಕೆ ಅನುಗುಣವಾಗಿ ಶತ್ರುಗಳು, ಮಿತ್ರರು ಆಗುತ್ತಾರೆ. ಕೆಲಸ ಆಗುವವರೆಗೆ

ನನ್ನ ಮಿತ್ರ ಅಂತಹವನು, ಇಂತಹವನು ಎಂದೆಲ್ಲ ಹೊಗಳುತ್ತಾರೆ. ಕೆಲಸವಾದ ಬಳಿಕ ಅವನನ್ನು ಮರೆಯುತ್ತಾರೆ, ಕೆಲವೊಮ್ಮೆ ದ್ವೇಷಿಸುತ್ತಾರೆ ಕೂಡ. ಈಗ ನಿನಗೆ ಪ್ರಾಣಭಯ ಉಂಟಾಗಿದೆ. ಅದಕ್ಕಾಗಿ ಕ್ಷಮೆ ಕೇಳುವ ಮಟ್ಟಕ್ಕೂ ಬಂದಿರುವೆ. ಪ್ರಾಣ ರಕ್ಷಣೆಯಾದ ಮರುಕ್ಷಣವೇ ನನ್ನನ್ನೇ ತಿಂದು ಹಸಿವು ನೀಗಿಸಿಕೊಳ್ಳುವ ಸ್ವಭಾವ ನಿನ್ನದು. ನಿನ್ನ ಈ ವಿನಯ ಸ್ವಾಭಾವಿಕವಲ್ಲ. ಸಂದರ್ಭಾನುಸಾರವಾಗಿ ಪ್ರಕಟಗೊಂಡಿರುವುದಷ್ಟೇ. ನಿನಗೋಸ್ಕರ ಈ ಬಲೆಯ ಅನೇಕ ತಂತಿಗಳನ್ನು ಕಡಿದು ಹಾಕಿದ್ದೇನೆ. ನನಗೋಸ್ಕರ ನಾಲ್ಕಾರು ತಂತಿಗಳನ್ನು ಉಳಿಸಿದ್ದೇನೆ. ಆ ಬೇಡ ಬಂದ ಕೂಡಲೇ ಅವುಗಳನ್ನು ಕಡಿದು ಹಾಕುತ್ತೇನೆ. ಅಲ್ಲಿಯವರೆಗೆ ಗೊಣಗದೆ ಸಾವಧಾನವಾಗಿರು. ನನ್ನನ್ನು ಆಪತ್ತಿನಿಂದ ಪಾರು ಮಾಡಿರುವ ನಿನ್ನನ್ನೂ ಆಪತ್ತಿನಿಂದ ರಕ್ಷಿಸುವುದು ನನ್ನ ಕರ್ತವ್ಯ ಎಂಬ ಪ್ರಜ್ಞೆ ನನಗಿದೆ. ನಾನು ಸಾಯದೇ ನಿನ್ನನ್ನೂ ಬದುಕಿಸಬೇಕೆಂಬ ಪ್ರಜ್ಞೆಯೂ ನನಗಿದೆ ".

ಈ ಮಾರ್ಜಾರ ಮೂಷಿಕ ಸಂವಾದ ನಡೆಯುತ್ತಿದ್ದಂತೆಯೇ ರಾತ್ರಿ ಮುಗಿದು ಬೆಳಗಾಯಿತು. ಬೇಕಾದಷ್ಟು ಪ್ರಾಣಿಗಳು ಬಲೆಯಲ್ಲಿ ಸಿಕ್ಕಿ ಬಿದ್ದಿರುತ್ತವೆ ಎಂದು ಕನಸು ಕಾಣುತ್ತಾ " ಪರಿಘ" ಎಂಬ ಹೆಸರಿನ ಆ ಚಂಡಾಲ ಬೇಡ ಬಲೆಯನ್ನು ಸಮೀಪಿಸಿದ.

ಯಮದೂತನಂತಿದ್ದ ಆ ಬೇಡನನ್ನು ಕಂಡು ಬೆಕ್ಕು ಹೆದರಿತು. ಇಲಿಯ ಮುಖ ನೋಡಿ ಕಣ್ಣೀರಿಟ್ಟಿತು, ಮೊರೆಯಿಟ್ಟಿತು.

ಇತ್ತ ಇಲಿಗಾಗಿ ಹೊಂಚು ಹಾಕಿ ಕುಳಿತಿದ್ದ ಮುಂಗುಸಿ, ಗೂಬೆಗಳು ಕೂಡ ಈ ಬೇಡನನ್ನು ಕಂಡು ಹೆದರಿ ಕಾಲು ಕಿತ್ತಿದವು.

ಬೇಡ ಬಲೆಯ ಹತ್ತಿರ ಬರುತ್ತಿದ್ದಂತೆಯೇ ಇಲಿ ಉಳಿದಿದ್ದ ನಾಲ್ಕಾರು ತಂತಿಗಳನ್ನು ಕಡಿದು ಹಾಕಿತು. ಸದ್ಯ ಉಳಿದರೆ ಸಾಕು ಎಂದು ಬೆಕ್ಕು ಓಡಿ ಮರ ಏರಿತು. ಇಲಿ ಬಿಲ ಸೇರಿತು.

ನಿರಾಸೆಯಾದ ಬೇಡ ಖಾಲಿ ಬಲೆಯನ್ನು ಹಿಡಿದು ತೆಪ್ಪಗೆ ಮನೆ ಸೇರಿದ. ಬೇಡ ಹೋದನಂತರ ಬೆಕ್ಕು ಮರದ ಮೇಲಿಂದ ಇಲಿಗೆ ಸತ್ಕಾರ ಕೂಟಕ್ಕೆ ಆಹ್ವಾನ ನೀಡಿತು – " ನನ್ನನ್ನು ರಕ್ಷಿಸಿದ ಇಲಿರಾಜನೇ ! ನನ್ನ ಹೆಂಡತಿ, ಮಕ್ಕಳು, ಅಣ್ಣ ತಮ್ಮಂದಿರೆಲ್ಲ ನಿನ್ನನ್ನು ನೋಡಬೇಕೆಂಬ ಕಾತರದಲ್ಲಿದ್ದಾರೆ. ನನ್ನ ಜೀವ ಉಳಿಸಿದ ನಿನ್ನನ್ನು ಸಂತೋಷದಿಂದ ಅವರಿಗೆ ಪರಿಚಯ ಮಾಡಬೇಕೆಂದಿದ್ದೇನೆ. ಹೆದರಬೇಡ. ಧೈರ್ಯವಾಗಿ ಹೊರ ಬಾ ".

" ನೀನೀಗ ನಿರಾತಂಕಿ. ನನ್ನಿಂದ ಯಾವ ಪ್ರಯೋಜನವೂ ಈಗ ನಿನಗಿಲ್ಲ. ನನ್ನನ್ನು ತಿನ್ನುವುದನ್ನು ಬಿಟ್ಟು.

ಅಹಮನ್ನಂ ಭವಾನ್ ಭೋಕ್ತಾ<br>
ದುರ್ಬಲೋಽಹಂ, ಭವಾನ್ ಬಲೀ ।<br>
ನಾವಯೋರ್ವಿದ್ಯತೇ ಸಂಧಿ ಃ<br>
ವಿಮುಕ್ತೇ ವಿಷಮೇ ಬಲೇ ॥

ನಾನು ನಿನ್ನ ಆಹಾರ. ನೀನು ನನ್ನನ್ನು ತಿನ್ನುವವನು. ನಾನು ದುರ್ಬಲ. ನೀನು ಪ್ರಬಲ. ಹೀಗಿರುವಾಗ ಕಷ್ಟ ಪರಿಹಾರವಾದ ಮೇಲೆ ನಮ್ಮಿಬ್ಬರಿಗೆ ಎಲ್ಲಿಯ ಸಂಧಾನ ?

ಅಷ್ಟು ಕೃತಜ್ಞತೆ ಸೂಚಿಸಬೇಕೆಂಬ ಅಪೇಕ್ಷೆ ಇದ್ದರೆ ನಿನ್ನನ್ನು ರಕ್ಷಣೆ ಮಾಡಿದ ಆ ಭಗವಂತನನ್ನು ಸ್ಮರಿಸು.

ಹೆಂಡತಿ, ಮಕ್ಕಳು, ಸ್ನೇಹಿತ ಎಲ್ಲವನ್ನೂ ಬಿಟ್ಟಾದರೂ ಆತ್ಮನನ್ನು ರಕ್ಷಣೆ ಮಾಡಿಕೊಳ್ಳ ಬೇಕು. ಇದು ಧರ್ಮಶಾಸ್ತ್ರ. ಹಿರಿಯರ ಅಭಿಮತ. ಸಾಕು ನಿನ್ನ ಸ್ನೇಹ " ಎಂದು ಬಿಲದಿಂದಲೇ ಉತ್ತರಿಸಿತು ಆ ದುರ್ಬಲವಾದ, ಆದರೆ ಜಾಣನಾದ ಇಲಿ.

ಇಲಿ ಒಬ್ಬ ಶತ್ರುವಿನೊಡನೆ ಸಂಧಾನ ಮಾಡಿಕೊಂಡು ಎರಡು ಶತ್ರುಗಳಿಂದ ತನ್ನನ್ನು ರಕ್ಷಿಸಿ ಕೊಂಡಿತು. ಬೆಕ್ಕು ಮಾಡಿದ ಉಪಕಾರಕ್ಕೆ ತಾನೂ ಪ್ರತ್ಯುಪಕಾರ ಮಾಡಿತು. ಆದರೆ ತನ್ನನ್ನು ಹಾನಿ ಮಾಡಿಕೊಳ್ಳಲಿಲ್ಲ. ಮುಂಗುಸಿ ಗೂಬೆಗಳು ಬಂದಾಗ ಹೆದರಿಕೆ ಆಗಿದ್ದರೂ, ಬಹಳ ಧೈರ್ಯ ಶಾಲಿಯಂತೆ ವರ್ತಿಸಿತು. ಶತ್ರುವಾದ ಬೆಕ್ಕಿನಲ್ಲಿ ವಿಶ್ವಾಸವಿಲ್ಲದಿದ್ದರೂ ವಿಶ್ವಾಸಿಯಂತೆ ನಟಿಸಿತು.

ಪ್ರಿಯ ಮಕ್ಕಳೆ !

ಆಪತ್ತು ಬಂದೊದಗಿದಾಗ ಬುದ್ಧಿವಂತರಾದವರು ಸ್ವಲ್ಪವೂ ಹೆದರದವರಂತೆ ತೋರಿಸಿಕೊಳ್ಳಬೇಕು. ವಿಶ್ವಾಸವಿಲ್ಲದ ಶತ್ರುವಿನಲ್ಲಿಯೂ ವಿಶ್ವಾಸಿಯಂತೆ ನಡೆದುಕೊಂಡು ಶತ್ರುಗಳೊಡನೆಯೂ ಸಂಧಾನ ಮಾಡಿ ಅವರ ಸಹಾಯ ಪಡೆದು ನಮ್ಮನ್ನು ರಕ್ಷಣೆ ಮಾಡಿಕೊಳ್ಳಬೇಕು. ಮಾಡಿದ ಉಪಕಾರವನ್ನು ಮರೆಯದೇ ಮಾತಿಗೆ ತಪ್ಪದೇ, ಪ್ರತ್ಯುಪಕಾರ ಮಾಡಬೇಕು. ಆದರೆ ಆತ್ಮ ರಕ್ಷಣೆಯೂ ಆಗಿರಬೇಕು.

I I I

# ಭಕ್ತ ಮಾರ್ಕಂಡೇಯ

ಭೃಗುವಿಗೆ ಖ್ಯಾತಿಯಲ್ಲಿ ಮೃಕಂಡು. ಮೃಕಂಡುವಿಗೆ ಸುಮಿತ್ರೆಯಲ್ಲಿ ಮಾರ್ಕಂಡೇಯ. '' ಹನ್ನೆರಡನೇ ವರ್ಷ ತುಂಬಲು ಇವನಿಗೆ ಮೃತ್ಯು'' - ಜ್ಯೋತಿಷಿಯೊಬ್ಬನ ನಿಷ್ಠುರ ನುಡಿ. ಪುತ್ರೋತ್ಪತ್ತಿಯ ಸಂತಸದಲ್ಲಿ ಘೋರ ಆಘಾತ. ಮಾರ್ಕಂಡೇಯನ ಉಪನಯನ. ಗುರುಕುಲದಲ್ಲಿ ವೇದಾಭ್ಯಾಸ.



ವೇದಸಂಪನ್ನ ಮಾರ್ಕಂಡೇಯನ ಆಗಮನ. ಮಾತಾಪಿತೃಗಳಲ್ಲಿ ಪುತ್ರನ ಪ್ರತಿಭೆ ನೋಡಿ ಮಹಾನ್ ಹರ್ಷ, ಮೃತ್ಯುವಿನ ನೆನಪಾಗಿ ಅಸಹ್ಯ ವೇದನೆ. ತಾಯಿ ತಂದೆಗಳ ದುಃಖವನ್ನು ನೋಡಿ ಮಾರ್ಕಂಡೇಯನಿಗೆ ಅಚ್ಚರಿ ! ಸಂತೋಷ ಪಡಬೇಕಿದ್ದ ಇವರು ಅಳುವುದೇಕೆ ? ಮಾರ್ಕಂಡೇಯನ ಮನವಿ. ತಾಯಿಯಿಂದ ಮೃತ್ಯು ಆಕ್ರಮಣದ ನಿವೇದನೆ. '' ಮೃತ್ಯುವಿನ ಮುನ್ಸೂಚನೆಯಿತ್ತ ನಿಮಗೆ ಕೃತಜ್ಞತೆ. ಇಷ್ಟಕ್ಕೇಕೆ ಆತಂಕ ? ತಪಸ್ಸು ಮಾಡಿ ನರಸಿಂಹನನ್ನು ಪ್ರಸನ್ನಗೊಳಿಸಿ ಮೃತ್ಯುವನ್ನು

ಗೆಲ್ಲುತ್ತೇನೆ ನಿಶ್ಚಿಂತೆಯಿಂದಿರಿ '' ಮಾರ್ಕಂಡೇಯರ ಭರವಸೆ. '' ವಲ್ಲೀವಠ '' ಎಂಬ ವನಪ್ರವೇಶ. ಭೃಗುಋಷಿಗಳ ದರ್ಶನ, ಆಯುಷ್ಯದ ಅಂತಿಮ ಘಟ್ಟದಲ್ಲಿರುವ ಮೊಮ್ಮಗನನ್ನು ಕಂಡ ಭೃಗುಮುನಿಗಳಿಗೆ ಕುತೂಹಲ, ಕುಶಲಪ್ರಶ್ನೆ.

'' ಮೃತ್ಯುವನ್ನು ಗೆಲ್ಲುವ ಬಗೆ ಎಂತು ?'' ಮಾರ್ಕಂಡೇಯರು ಭೃಗುಋಷಿಗಳಲ್ಲಿ ಕೇಳಿದರು. '' ನಾರದರು ಯಾರನ್ನು ಸೇವಿಸಿ ಜರಾ ಮೃತ್ಯುಗಳನ್ನು ಗೆದ್ದರೋ ಆ ಶ್ರೀಮನ್ನಾರಾಯಣನನ್ನೇ ಕುರಿತು ಶ್ರೇಷ್ಠ ತಪಸ್ಸು ಮಾಡು '' ಕಿಮಲಭ್ಯಂ ಭಗವತಿ ಸುಪ್ರಸನ್ನೇ ಶ್ರೀನಿಕೇತನೇ ? '' ತುಂಗಾ ಭದ್ರಾನದಿಗಳ ನಡುವೆ ಭಗವಂತನನ್ನು ಪ್ರತಿಷ್ಠೆ ಮಾಡಿ ಪೂಜೆ ಮಾಡು '' - ಪಿತಾಮಹರ ಮಾರ್ಗದರ್ಶನ.

ಮಂಗಲ ತಪೋಭೂಮಿಯಲ್ಲಿ ಪರಮ ಮಂಗಲನಾದ ಸರ್ವಮಂಗಳಾಧಿಪತಿಯನ್ನು ಕುರಿತು ಮಾರ್ಕಂಡೇಯರ ಮಹಾ ತಪಸ್ಸು. ಓಂಕಾರೋಚ್ಚಾರಣ ಪೂರ್ವಕವಾಗಿ ಹೃದಯಕಮಲವನ್ನು ಅರಳಿಸಿ ರವಿ, ಸೋಮ, ಅಗ್ನಿ ಮಂಡಲಗಳನ್ನು ಶ್ರೀ ಹರಿಯ ಪೀಠವಾಗಿ ಕಲ್ಪಿಸಿಕೊಂಡು ಅದರ ಮಧ್ಯದಲ್ಲಿ ಶಂಖ ಚಕ್ರ ಪೀತಾಂಬರಧಾರಿಯಾದ ಭಗವಂತನನ್ನು ಧ್ಯಾನಿಸುತ್ತಾ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸಿದರು. ಜಿತೇಂದ್ರಿಯರಾಗಿ ಸ್ವಸ್ತಿಕಾಸನದಲ್ಲಿ ಕುಳಿತು ಭಕ್ತಿಯಿಂದ ಧ್ಯಾನಮಗ್ನರಾದ ಮಾರ್ಕಂಡೇಯರ ಆಯುಷ್ಯ ಕೊನೆಗೊಳ್ಳುತ್ತಿರುವಂತೆ ಯಮಕಿಂಕರರು ಪಾಶ ಹಿಡಿದು ಬಂದರು. ಆದರೆ ಭಗವಂತನ ಆಜ್ಞೆಯಂತೆ ಮಾರ್ಕಂಡೇಯನನ್ನು ಕರೆದೊಯ್ಯಲು ಬಂದರೂ ಅವರನ್ನು ವಿಷ್ಣುಕಿಂಕರರು ಹೊಡೆದು ಓಡಿಸಿದರು.

ಇತ್ತ ಮಾರ್ಕಂಡೇಯರ, ನಿಶ್ಚಲಧ್ಯಾನ. ಅವರ ಈ ಅಖಂಡಧ್ಯಾನದಿಂದ ಪ್ರಸನ್ನನಾದ ಭಗವಂತ ತಾನೇ ಮಾರ್ಕಂಡೇಯರ ಕಿವಿಯಲ್ಲಿ ಸ್ತೋತ್ರವೊಂದನ್ನು ಉಪದೇಶಿಸಿ ಅವರಿಂದ ಸ್ತುತ್ಯನಾದ. ಮಾರ್ಕಂಡೇಯರು ಹೇಳುತ್ತಿದ್ದ ಆ ಭಗವತ್ ಸ್ತೋತ್ರವನ್ನು ಕೇಳಿ ಮೃತ್ಯು ಪಲಾಯನ ಮಾಡಿದ.

ಈ ಘಟನೆಯಿಂದ ಕಂಗಾಲಾದ ಯಮಕಿಂಕರರು ಯಮನ ಬಳಿ ತಮ್ಮ ಕಹಿ ಅನುಭವವನ್ನು ತೋಡಿಕೊಂಡರು. ಆಗ ಯಮದೇವರು ತನ್ನ ಭೃತ್ಯರನ್ನು ಕುರಿತು '' ಯಾರು ಭಗವಂತನ ಸ್ಮರಣೆ ಮಾಡುವರೋ, ಯಾರು ಸತ್ಕರ್ಮದಲ್ಲಿ ಆಸಕ್ತರೋ ಅವರ ಬಳಿ ಸುಳಿಯಬೇಡಿ. ಭಗವಂತನಿಗೆ ವಿಮುಖರಾದವರನ್ನು ಎಳೆದು ತನ್ನಿ ರೆಂದು'' ತಿಳಿಸುವರು. ಅನಂತರ ನರಕದಲ್ಲಿ ಕ್ಲೇಶಪಡುವ ಮಂದಿಯನ್ನು ಕಂಡು ಕೃಪೆಯಿಂದ ಸಕಲಕ್ಲೇಶಪರಿಹಾರಕನಾದ ಕೇಶವನ ಪೂಜಿಸದೆ ಇಲ್ಲಿಗೇಕೆ ಬಂದಿರಿ? ಎಂದು ಕೇಳಿದ ಯಮದೇವರು, ಶ್ರೀಹರಿ ನೀಡಿರುವ '' ಹೆಜ್ಜೆ ಹೆಜ್ಜೆಗೆ ಕೃಷ್ಣನ ಸ್ಮರಣೆ ಮಾಡುವ ಭಕ್ತರನ್ನು ನರಕದಿಂದ ಉದ್ಧಾರ ಮಾಡುತ್ತೇನೆ '' - ಎಂಬ ಭರವಸೆಯ ವಚನವನ್ನು ತಿಳಿಸಿದರು. ಈ ಯಮ ಮತ್ತು ಅವರ ಕಿಂಕರರು ನಡೆಸಿದ ಸಂಭಾಷಣೆಯನ್ನು ಕೇಳಿದ ನರಕದ ಜನರು ಕೂಡಲೆ ಹರಿನಾಮಸ್ಮರಣೆ ಮಾಡಿ ದಿವ್ಯವಿಮಾನವನ್ನು ಏರಿ ಸ್ವರ್ಗ ಸೇರಿದರು.

ಅತ್ತ ಮಾರ್ಕಂಡೇಯರು ಮೃತ್ಯುವನ್ನು ಗೆದ್ದು ಮನೆಗೆ ಹೋಗಿ ವಿವಾಹಿತರಾಗಿ ವೇದಶಿರಸ್ಸು ಎಂಬ ಮಗನನ್ನು ಪಡೆದು ಧಾರ್ಮಿಕ ಜೀವನವನ್ನು ನಡೆಸಿದರು. ಕೆಲವು ಕಾಲದ ಬಳಿಕ ಮಾರ್ಕಂಡೇಯರಿಗೆ ತನ್ನ ಮೃತ್ಯುಪರಿಹಾರಕನಾದ ಆ ಭಗವಂತನನ್ನು ಕಣ್ಣಾರೆ ಕಾಣುವ ಬಯಕೆ ಹುಟ್ಟಿತು. ' ವಟತಲ' ಎಂಬ ಪ್ರದೇಶದಲ್ಲಿ ವಾಯು ಆಹಾರವಾಗಿ ಉಗ್ರ ತಪಸ್ಸನ್ನು ಆರಂಭಿಸಿದರು. ಶಂಖ ಚಕ್ರಧರನಾದ ಶ್ರೀಹರಿಯನ್ನು ಭಕ್ತಿಯಿಂದ ಸ್ತೋತ್ರಮಾಡಿದರು. ಸ್ತೋತ್ರದ ಕೊನೆಯಲ್ಲಿ ಒಂದು ಅಶರೀರ ವಾಣಿ ಕೇಳಿಬಂತು - '' ತೀರ್ಥಸ್ನಾನ ಮಾಡದೆ ಕೇವಲ ತಪಸ್ಸಿನಿಂದ ಆ ಶ್ರೀಹರಿ ಹೇಗೆ ಪ್ರಕಟನಾದನು ? '' ಮಾರ್ಕಂಡೇಯರು ಮರು ಮನವಿ ಸಲ್ಲಿಸಿದರು - '' ಸಕಲ ತೀರ್ಥ ಸ್ನಾನ ಫಲ ಬರುವ ಆ ಭಗವಂತನ ಸ್ತೋತ್ರವನ್ನು ನೀನೇ ಉಪದೇಶಿಸು '' ಅಶರೀರವಾಣಿ ಉಪದೇಶಿಸಿದ ಸಕಲ ತೀರ್ಥ ಫಲಪ್ರದ ಸ್ತೋತ್ರವನ್ನು ಪಠಿಸಿದರು. ಕೂಡಲೇ ಭಗವಂತ ಪ್ರತ್ಯಕ್ಷನಾದ. ಮಾರ್ಕಂಡೇಯರು ಭಕ್ತ್ಯುದ್ರೇಕದಿಂದ ಭಗವಂತನ ಪಾದತಲದಲ್ಲಿ ಹೊರಳಾಡಿದರು, ನಮಿಸಿದರು, ಸ್ತುತಿಸಿದರು.

ಪ್ರಸನ್ನನಾದ ಭಗವಂತ ವರ ನೀಡಲು ಮುಂದೆ ಬಂದರೆ ಮಾರ್ಕಂಡೇಯರು, " ನಿನ್ನಲ್ಲಿ ಅಚಂಚಲವಾದ ಭಕ್ತಿಯನ್ನು ಕೊಡು, ನಿನ್ನನ್ನು ಬಹಳ ಕಾಲ ಪೂಜೆ ಮಾಡಲು ಅನುಕೂಲವಾಗುವಂತೆ ಚಿರಾಯುಷ್ಯವನ್ನು ಕೊಡು " ಎಂದು ಕೇಳಿದರು.

" ಈಗಾಗಲೇ ಚಿರಾಯುಷ್ಯ ಪಡೆದಾಗಿದೆ. ಆದುದರಿಂದ ನಿಶ್ಚಲ ಭಕ್ತಿಯನ್ನು ಕೊಡುತ್ತೇನೆ, ಯಾವ ತೀರ್ಥದ ಬಳಿ ನೀನು ತಪಗೈದೆಯೋ ಆ ತೀರ್ಥ ನಿನ್ನ ಹೆಸರಿನಿಂದಲೇ ಖ್ಯಾತಿಗೊಳ್ಳಲಿ. ಮತ್ತೆ ಕ್ಷೀರಸಮುದ್ರದಲ್ಲಿ ದರ್ಶನ ಕೊಡುವೆ," ಎಂದು ದೇವರು ಅನುಗ್ರಹಿಸಿದರು.

ದೇವಾನುಗ್ರಹ ಪಡೆದು ಮನೆಗೆ ಮರಳಿದ ಮಾರ್ಕಂಡೇಯರು ಸುತ್ತಲಿನ ಋಷಿಮುನಿಗಳಿಗೆ ಪುರಾಣಗಳನ್ನು ತಿಳಿಸುತ್ತ ಭಗವಂತನ ಚಿಂತನೆಯಲ್ಲಿ ಕಾಲ ಕಳೆದರು. ಭಗವಂತನ ಮಾತಿನಂತೆ ಕ್ಷೀರಸಮುದ್ರದಲ್ಲಿ ಹೋಗಿ ಭಗವಂತನನ್ನು ಕಾಣಲು ಪ್ರಾರ್ಥಿಸಿದರು.

ಆವಿರ್ಭಾವಗೊಂಡ ಹರಿಯ ಮುಂದೆ " ನೀನು ಹಿಂದೆ ಅನುಗ್ರಹಿಸಿದ ಚಿರಾಯುಷ್ಯ ಇಂದಿಗೆ ಸಾರ್ಥಕವಾಗಿದೆ. ನಿನ್ನ ಪಾದಕಮಲವನ್ನು ಪೂಜಿಸಿಕೊಂಡು ಇಲ್ಲಿಯೆ ವಾಸಮಾಡುತ್ತೇನೆ " - ಎಂದು ಪ್ರಾರ್ಥಿಸಿದರು ಮಾರ್ಕಂಡೇಯರು.

" ಪ್ರಿಯ ಮಾರ್ಕಂಡೇಯ ! ಅವಿಚ್ಛಿನ್ನವಾದ ಭಕ್ತಿ ನಿನ್ನಲ್ಲಿ ಸ್ಥಿರವಾಗಿರಲಿ, ಕಾಲಕ್ರಮವಾಗಿ ಮುಕ್ತಿಯು ನಿನಗೆ ದೊರಕುವುದು. ನೀನು ಸ್ಮರಿಸಿದಾಗಲೆಲ್ಲ ನನ್ನ ದರ್ಶನಲಾಭ ನಿನಗಾಗುವುದು "- ಎಂದು ಮಹದನುಗ್ರಹವನ್ನು ಕರುಣಿಸಿದನು - ಶ್ರೀಹರಿಯು.

ಮಾರ್ಕಂಡೇಯರು ಮಾಡಿದ ಸ್ತೋತ್ರಗಳೆಲ್ಲದಕ್ಕೂ ಫಲಪ್ರದನಾಗಿ ಶ್ರೀಹರಿ ಅನುಗ್ರಹಿಸುವನು - ಎಲ್ಲರಿಗೂ.



# ಭಕ್ತ ಪುಂಡರೀಕ

ಗುರುಕುಲದಲ್ಲಿ ವಿದ್ಯಾಭ್ಯಾಸ ಮುಗಿಸಿದ ಪುಂಡರೀಕನಿಗೆ ಗೃಹಸ್ಥಾಶ್ರಮದಲ್ಲಿ ಆಸಕ್ತಿ ಮೂಡಲಿಲ್ಲ. " ಚಂಚಲವಾದ ತಾರುಣ್ಯ, ಚಂಚಲವಾದ ಸಂಪತ್ತು, ಇವುಗಳಿಂದ ಬರುವ ಸುಖವೂ ನಶ್ವರ. ಸುಖವನ್ನು ಅರಸಿಕೊಂಡು ದುಃಖದ ಸರಮಾಲೆಯನ್ನು ತೊಡುವುದೇಕೆ ? " ಎಂದು ಯೋಚಿಸಿದ. ಅನೇಕ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸುತ್ತ " ಸಾಲಗ್ರಾಮ" ಎಂಬ ಪವಿತ್ರ ತಪೋಭೂಮಿಗೆ ಬಂದ. ಅಲ್ಲಿ ಅನೇಕ ಋಷಿಮುನಿಗಳು ಸತತ ಭಗವಂತನ ಅನಂತ ಗುಣ ಸಂಕೀರ್ತನೆ ಮಾಡುತ್ತಿರುವರು. ಆ ರಮ್ಯ ಪರಿಸರದಲ್ಲಿ ಭಗವಂತನನ್ನೇ ಚಿಂತಿಸುತ್ತ ಆ ಮುನಿಗಳಿಂದ ಕಥಾಶ್ರವಣ ಮಾಡುತ್ತ ಕಾಲ ಕಳೆದ. ಒಮ್ಮೆ ಒಬ್ಬ ಮಹಾ ತೇಜಸ್ವೀ ಮಹಾ ತಪಸ್ವಿಗಳು ಎದುರಾದರು. ಅವರ ಬ್ರಹ್ಮವರ್ಚಸ್ಸಿಗೆ ಆಕರ್ಷಿತನಾದ ಪುಂಡರೀಕ ತಾವು ಯಾರೆಂದು ಕೇಳಿದಾಗ " ನಾನು ನಾರದಮಹರ್ಷಿ, ಭಗವದ್ಭಕ್ತನಾದ ನಿನ್ನನ್ನು ನೋಡಲೆಂದೇ ಬಂದೆ. ಭಗವದ್ಭಕ್ತರ ದರ್ಶನ, ಸಂಭಾಷಣ ಎಲ್ಲವೂ ಶ್ರೇಯಸ್ಕರ " ಎಂದರು.

ದೇವರ್ಷಿ ನಾರದರ ಸಂದರ್ಶನದಿಂದ ರೋಮಾಂಚ ಗೊಂಡ ಪುಂಡರೀಕ - "ನಿಮ್ಮಂತಹ ಮಹಾತ್ಮರ ದರ್ಶನ ಆಯಿತೆಂದರೆ ನನ್ನ ಎಲ್ಲ ಸಾಧನೆಗಳೂ ಫಲ ಕೊಟ್ಟಿವೆ ಎಂದೇ ಅರ್ಥ. ನಾನು ಕೃತಕೃತ್ಯ. ಬ್ರಹ್ಮದೇವರ ಮಾನಸ ಪುತ್ರರಾದ ಯಾವಾಗಲೂ ಭಗವಂತನನ್ನು ಕೊಂಡಾಡುವ ನೀವೆಲ್ಲಿ ? ಅಲ್ಪಜ್ಞಾನಿಯಾದ ಮಂದ ಮಾನವ ನಾನೆಲ್ಲಿ ? "

ಬ್ರಹ್ಮಜ್ಞಾನಿಗಳಾದ ನಿಮ್ಮ ಭೇಟಿಯಾಗಿರುವ ಈ ಸಂತಸದ ಸಂದರ್ಭದಲ್ಲಿ ನನ್ನ ಸಂದೇಹಗಳನ್ನು ಪರಿಹರಿಸಿಕೊಂಡು ಯಥಾರ್ಥಜ್ಞಾನವನ್ನು ಪಡೆಯುತ್ತೇನೆ. ಕೆಲವರು ಸಾಂಖ್ಯವನ್ನು, ಕೆಲವರು ಯೋಗವನ್ನು, ಕೆಲವರು ಕರ್ಮವನ್ನು, ಮತ್ತೆ ಕೆಲವರು ಬ್ರಹ್ಮಜ್ಞಾನವನ್ನು - ಹೀಗೆ ಬೇರೆ ಬೇರೆ ಮಾರ್ಗಗಳನ್ನು ಶ್ರೇಷ್ಠವೆಂದು ನುಡಿದರು. ನಾನು ಯಾವುದನ್ನು ಅವಲಂಬಿಸಬೇಕು ." ಎಂದು ಕೇಳಿದನು.

ಪುಂಡರೀಕನ ಜಿಜ್ಞಾಸೆಯನ್ನು ಕಂಡು ಹರ್ಷಗೊಂಡ ನಾರದರು ತನಗೆ ಬ್ರಹ್ಮ ದೇವರು ತಿಳಿಸಿದ ತತ್ತ್ವರಹಸ್ಯವನ್ನು ಉಪದೇಶಿಸಿದರು - "ವ್ಯಾಮೋಹದ ಉದ್ವೇಶದಿಂದ ಅನೇಕ ಮಾರ್ಗಗಳು ಇದ್ದರೂ, ಸರ್ವೋತ್ತಮನೂ, ಸರ್ವತ್ರ ವ್ಯಾಪ್ತನೂ ಆದ ಭಗವಂತನನ್ನು ಯಥಾರ್ಥವಾಗಿ ಅರಿತುಕೊಂಡು ಭಕ್ತಿ ಮಾಡುವುದೇ ನಿಜವಾದ ಸಾಧನ ಮಾರ್ಗ " ಎಂದು.

ಅದರಂತೆ ಭಗವಂತನನ್ನು ಅರಿತು ನಿರಂತರ ಧ್ಯಾನಾದಿಗಳಿಂದ ಅವನನ್ನು ಮೆಚ್ಚಿಸಿದಾಗ ಶ್ರೀಹರಿಯೇ ದರ್ಶನ ಕೊಟ್ಟ. ಪ್ರಸನ್ನನಾದ ಭಗವಂತ ವರವನ್ನು ಕೇಳೆಂದಾಗ , ತನ್ನಂಥ ಅಲ್ಪನಿಗೂ ದರ್ಶನ ಕೊಟ್ಟ ಭಗವಂತನ ಬಗ್ಗೆ ಗೌರವ ಹೆಚ್ಚಿತು . ಅಪ್ರಾಕೃತವಾದ ಅದ್ಭುತವಾದ ಆ ಭವ್ಯ ರೂಪವನ್ನು ಕಂಡು ಸಂತಸಗೊಂಡ ಪುಂಡರೀಕ " ಯಾವುದನ್ನು ಕೇಳಬೇಕೆಂಬ ಅರಿವೂ ನನಗಿಲ್ಲ. ಯಾವುದು ಕೊಡಬೇಕೋ ಅದನ್ನು ನೀನೇ ವಿಚಾರ ಮಾಡಿಕೊಡು " ಎಂಬ ವಿನಯ ಪ್ರಕರ್ಷವನ್ನು ತೋರಿದನು. ಆ ವಿನಯ ಭಕ್ತಿಗಳಿಗೆ ಹರ್ಷಗೊಂಡ ಭಗವಂತ ನನ್ನ ಪಾರ್ಷದನಾಗು ಎಂದು ಅನುಗ್ರಹಿಸಿದ.

ಭಗವಂತನಲ್ಲಿ ಪ್ರಾರ್ಥನೆ ಮಾಡುವ ರೀತಿಯನ್ನು ಹೇಳಿ ಕೊಡುವ ಈ ಕಥೆ ನಮ್ಮ ಸಾಧನೆ ಭಗವಂತನಿಗೆ ಪ್ರಿಯವಾದರೆ ಉತ್ತಮ ಮಾರ್ಗದರ್ಶಕರು ಸಿಗುವಂತೆ ಮಾಡಿ ಉತ್ತಮ ಸಾಧನೆ ಮಾಡಿಸಿಕೊಂಡು ಹೇಗೆ ಅನುಗ್ರಹಿಸುತ್ತಾನೆ ಶ್ರೀ ಹರಿ ಎಂಬುದನ್ನೂ ತಿಳಿಸುತ್ತದೆ.



# ಪಾತಿವ್ರತ್ಯ ಪ್ರಭಾವ

ಯಜ್ಞಶರ್ಮ-ರೋಹಿಣಿಯರ ಮಧುರ ದಾಂಪತ್ಯದ ಫಲ ದೇವಶರ್ಮ. ಯಜ್ಞಶರ್ಮನ ಯಾಯಾವರ ವೃತ್ತಿಯಿಂದ ಕುಟುಂಬ ಪೋಷಣೆ. ದೇವಶರ್ಮನ ಉಪನಯನ, ವೇದಾಭ್ಯಾಸಗಳು ಕಳೆದ ಬಳಿಕ ಯಜ್ಞಶರ್ಮ ದಿವಂಗತ. ದೇವಶರ್ಮನಿಂದ ಉತ್ತರಕ್ರಿಯೆ. ಮಾತೆ ಮನೆಯಲ್ಲಿ, ಮಗ ಕಾಡಿನಲ್ಲಿ. ತಪಸ್ವಿ ಭಿಕ್ಷಾಟನೆಯಿಂದ ಉದರ ಪೋಷಣೆ.

ಅದೊಂದು ದಿನ-ಸ್ನಾನಮುಗಿದಿದೆ. ದಡದಲ್ಲಿ ಬಟ್ಟೆ ಒಣ ಹಾಕಿದೆ. ಹಕ್ಕಿಗಳು ಬಟ್ಟೆಯನ್ನು ತೆಗೆದುಕೊಂಡು ಹಾರಿವೆ. ಹಕ್ಕಿ ಬಾನಿನಲ್ಲಿ, ಬ್ರಾಹ್ಮಣ ಭೂಮಿಯಲ್ಲಿ ಓಡಿದ್ದಾರೆ. ಬಟ್ಟೆಯಲ್ಲಿ ಮಲ ಮೂತ್ರ ವಿಸರ್ಜನ ಮಾಡಿ ಕೆಳಗೆ ಬಿಸಾಡಿವೆ ಹಕ್ಕಿಗಳು. ಬ್ರಾಹ್ಮಣನಿಗೆ ಭೂರಿಕೋಪ, ಉಗ್ರನೋಟ. ಹಕ್ಕಿಗಳು ಭಸ್ಮ. ದ್ವಿಜನಿಗೆ ಬಲು ಹೆಮ್ಮೆ. ಜೊತೆಗೆ ಹಮ್ಮು-''ಯಾರಿಹರು ಎನಗೆ ಸರಿಸಾಟಿ ತಪಸಿನಲಿ ?''.

ಎಂದಿನಂತೆ ದೇವಶರ್ಮನ ಭಿಕ್ಷಾಟನೆ, ವೇದಪಾರಗನಾದ ' ಕಶ್ಯಪ' ಎಂಬ ಬ್ರಾಹ್ಮಣನ ಸತಿ-ಮಹಾ ಪತಿವ್ರತೆ-ಸಾವಿತ್ರಿಯ ಮನೆಯ ಮುಂದೆ ಭಿಕ್ಷೆಗಾಗಿ ದೇವಶರ್ಮ. ಆಗತಾನೆ ದಣಿದು ಬಂದ ಪತಿಯ ಸಾಂತ್ವನ-ಮನೆಯಲ್ಲಿ ಸಾವಿತ್ರಿಯಿಂದ, ತಡಮಾಡಿ ಭಿಕ್ಷಾ ಪ್ರದಾನ. ಕುಪಿತ ಬ್ರಾಹ್ಮಣ ಕನಲಿಕೆಂಡ, ಉರಿನೋಟ, ಪತಿವ್ರತೆಯ ತೆಳುಹಾಸ್ಯ, ನಾನೇನು ನದಿಯ ದಡದಲ್ಲಿ ಬೂದಿಯಾದ ಹಕ್ಕಿಯಲ್ಲ !- ಪತಿವ್ರತೆಯ ಬಿಚ್ಚುನುಡಿ. ಬ್ರಾಹ್ಮಣ ಗಲಿಬಿಲಿ.

ಅಭಿಮಾನ ಆಚೆಗೆ, ಸನ್ಮಾನ ಆಕೆಗೆ, ಜಿಜ್ಞಾಸೆ ಅವನಿಗೆ. ಪರೋಕ್ಷವಿಷಯ ವಿಜ್ಞಾನ ಬಂದದ್ದು ಹೇಗೆ ? '' ಸ್ವಕರ್ತವ್ಯಪಾಲನೆ-ಪತಿ ಶುಶ್ರೂಷೆಯಿಂದ - ಈ ಸಿದ್ಧಿ '' ಸಾವಿತ್ರಿಯ ಸಮಾಧಾನ. '' ವೃದ್ಧಳಾದ, ದೀನಳಾದ, ಅನಾಥೆಯಾದ ತಾಯಿಯನ್ನು ಏಕಾಕಿಯಾಗಿ ಮನೆಯಲ್ಲಿ ಬಿಟ್ಟು ತಪಸ್ವಿಯ ಸೋಗು ಹಾಕಿರುವ ನಿನಗೆ ಲಜ್ಜೆಯಿಲ್ಲವೆ ? ಸಾಕು ಸಾಧನೆ, ಹೋಗು ಬೇಗನೇ, ಮಾತೃಪರಿರಕ್ಷಣೆಯೇ

ಪರಮ ಧರ್ಮ, ಗರ್ಭದಲ್ಲಿ ಹೊತ್ತು ನಂತರ ಹೆತ್ತು ಪೋಷಣೆ ಮಾಡಿದ ತಾಯಿಯನ್ನು, ಸ್ವಲ್ಪವೂ ಅಸಹ್ಯಪಟ್ಟುಕೊಳ್ಳದೆ ಬಾಲ್ಯದ ನಿನ್ನ ಹಾಸಿಗೆಯ ಹೇಸಿಗೆ ಸ್ವಚ್ಛಮಾಡಿದ ತಾಯಿಯನ್ನು ಕಾಪಾಡದೆ ಮೂಗು ಹಿಡಿದು ಕೂತರೆ ಏನು ಫಲ ?''



''ಸಜೀವತಿ ವೃಥಾ ಬ್ರಹ್ಮನ್ ಯಸ್ಯ ಮಾತಾ ಸುದುಃಖಿತಾ ।
ಯೋ ರಕ್ಷೇತ್ ಸತತಂ ಭಕ್ತ್ಯಾ ಮಾತರಂ ಮಾತೃವತ್ಸಲಃ ॥
ತಸ್ಯೇಹಾನುಷ್ಠಿತಂ ಸರ್ವಂ ಫಲಂ ಚಾಮುತ್ರ ಚೇಹ ಹಿ ।
ಮಾತುಶ್ಚ ವಚನಂ ಬ್ರಹ್ಮನ್ ಪಾಲಿತಂ ಯೈರ್ನರೋತ್ತಮೈಃ ॥
ತೇ ಮಾನ್ಯಾ ತೇ ನಮಸ್ಕಾರ್ಯಾ ಇಹ ಲೋಕೇ ಪರತ್ರ ಚ '' ॥

ಯಾರ ತಾಯಿ ದುಃಖಿತಳಾಗಿದ್ದಾಳೆ ಅವನ ಜೀವನ ನಿರರ್ಥಕ, ತಾಯಿಯನ್ನು

ಕಾಪಾಡಿದವನು ಮಾಡಿದ್ದೆಲ್ಲ ಸಫಲ, ಮಾತೃವಚನ ಪಾಲನೆ ಮಾಡಿದವರು ಮಾನ್ಯರು ಇಲ್ಲಿ, ಅಲ್ಲಿಯೂ. ಆದುದರಿಂದ ಮೊದಲು ತಾಯಿ ಸೇವೆಗೆ ಸಿದ್ಧನಾಗು. ತಪಸ್ಸಿನ ಹಮ್ಮಿನಿಂದ ಹಕ್ಕಿ ಬೂದಿ ಮಾಡಿದುದಕ್ಕೆ ಪ್ರಾಯಶ್ಚಿತ್ತ ಮಾಡಿಕೋ. ಸಾಧನೆಯನ್ನು ಹಾಳುಮಾಡುವ ಕೋಪವನ್ನು ಬಿಡು. ಯತಿಕರ್ಮನ ಮಗಳು ಪತ್ನಿ ಯಾಗುತ್ತಾಳೆ. ಒಂದು ಗಂಡು ಮಗು ನಿನಗೆ, ಸತಿಯ ದಿವಂಗತಿಯ ನಂತರ ಯತಿಯಾಗಿ ವಿಷ್ಣುಲೋಕವನ್ನು ಸೇರುವಿ " ಅತೀತವನ್ನು ನುಡಿದಿದ್ದ ಸಾವಿತ್ರಿ ಅನಾಗತವನ್ನೂ ತಿಳಿದಿದ್ದಳು. ಅವಳ ಪಾತಿವ್ರತ್ಯದ ಸಿದ್ಧಿಗೆ ಬೆಕ್ಕಸ ಬೆರಗಾದ ದೇವಶರ್ಮ ಮನೆಗೆ ಮರಳಿದ. ಸಾಧನೆ ಮಾಡಿ ಸಿದ್ಧಿ ಹೊಂದಿದ.

ಪಾತಿವ್ರತ್ಯ ಪ್ರಭಾವ. ಮಾತೃರಕ್ಷಣೆಯ ಮಹತ್ವಗಳನ್ನು ಪ್ರತಿಪಾದಿಸುವ ಈ ಕಥೆ ನರಸಿಂಹ ಪುರಾಣದಲ್ಲಿ ಬಂದಿದೆ.



# ಮಹಾಪತಿವ್ರತೆ ತಾರಾ

ಸೌಂದರ್ಯದ ಖನಿ ಎನಿಸಿರುವ ' ತಾರೆ ' ಬೃಹಸ್ಪತ್ಯಾಚಾರ್ಯರ ಮಡದಿ. ಸೊಬಗಿನ ವೈಯ್ಯಾರದಿಂದ ಜಾಹ್ನವಿಯ ತಟದಲ್ಲಿ ಮನೆಗೆ ಹೊರಟಿದ್ದಳು. ಸಾಕಾರದ ಸೌಂದರ್ಯ ರಾಶಿಯನ್ನು ಕಂಡ ಚಂದ್ರನ ಮನದಲ್ಲಿ ಬಯಕೆ ಮೂಡಿತು. ನಿನ್ನಂಥ ರಸಿಕ ಸುಂದರಿ, ಆ ವಿರಕ್ತಿಯ ತಪಸ್ವಿ ಬೃಹಸ್ಪತಿಗೆ ಎಲ್ಲಿಯ ಜೋಡಿ. ಬಳಿಗೆ ಬಾ ಈ ರಸಿಕನೆದೆಯಲ್ಲಿ ಅವಿತುಕೋ-ಚಂದ್ರನ ಕಾಮ ಕೇಲಿಯ ಆಹ್ವಾನ ತಲುಪಿತು ತಾರೆಗೆ.



' ಪರಸ್ತ್ರೀ - ವಿಪ್ರಪತ್ನಿಯನ್ನು ಕೆಣಕುವ, ಬಯಸುವ ನಿನಗೆ ಧಿಕ್ಕಾರ. ರಾಜಸೂಯ ಯಾಗ ಮಾಡಿದ ನಿನ್ನ ಮಹತ್ತಿಕೆಗೆ ನೀನೇ ಮಸಿ ಬಳಿದೆ. ಮಾತೃ ಸದೃಶಳಾದ ನನ್ನನ್ನು ಬಿಡು. ಸಂತಸವನ್ನು ಹೊಂದುವಿ. ಪರಸ್ತ್ರೀ ಗಮನ ಮಾಡಿದ ನಿನ್ನನ್ನು ಆ ಭಗವಂತ ಕ್ಷಮಿಸಲಾರ.'

ತಾರೆಯ ಬಿರುನುಡಿ ಚಂದ್ರನ ಕಾಮಕ್ಕೆ ಕಿಚ್ಚಿಟ್ಟಿತು. ಕಾಮದ ಇನ್ನೊಂದು ಮುಖ - ಕ್ರೋಧಕ್ಕೆ ವಶನಾದ ಚಂದ್ರ. ಬಲಾತ್ಕಾರವಾಗಿ ಎಳೆದು ರಥದ ಮೇಲೆ

ಕೂಡಿಸಿಕೊಂಡು ಹಾರಿದ. ತಾರೆ ಹೌಹಾರಿದಳು. ಸುಂದರ ಕ್ರೀಡಾ ಪರ್ವತಗಳ ಉಪವನಗಳಲ್ಲಿ ತಾರೆಯನ್ನು ಬೆದರಿಸಿ ವಿಹರಿಸಿದ.

ಸುರಲೋಕಕ್ಕೆ ತಾರೆಯನ್ನು ಕರೆದೊಯ್ಯಲು ಹೆದರಿದ ಚಂದ್ರ ದೇವಶತ್ರು ಶುಕ್ರಾಚಾರ್ಯರಲ್ಲಿ ಶರಣಾದ. ಶುಕ್ರಾಚಾರ್ಯರಿಗೂ ಚಂದ್ರನ ಶರಣಾಗತಿ ಖುಷಿಕೊಟ್ಟಿತು. ದೈತ್ಯರಿಗೆಲ್ಲ ಸಂತಸ. ಆದರೆ ಶುಕ್ರಾಚಾರ್ಯರು ಧರ್ಮ ವಿರೋಧಿಗಳಲ್ಲ. ' ಸುರಗುರು ಬೃಹಸ್ಪತ್ಯಾಚಾರ್ಯರು ಶ್ರೇಷ್ಠ ತಪಸ್ವಿಗಳು. ಅಂಥವರ ಸತಿಯು ನಿನಗೆ ಪೂಜ್ಯಳು. ಆಕೆಯನ್ನು ಈ ಕ್ಷಣದಲ್ಲಿ ಬಿಟ್ಟು ಬಿಡು. ತಾರೆಯನ್ನು ಅಪಹರಿಸುವುದು ಅಕ್ಷಮ್ಯ ಅಪರಾಧ. ಪ್ರಾಯಶ್ಚಿತ್ತ ಮಾಡಿಕೊಳ್ಳಲೇ ಬೇಕು. ಇದೋ ಈ ಜಾಹ್ನವಿಯಲ್ಲಿ ಮುಳುಗು. ಆ ಶ್ರೀ ಹರಿಯನ್ನು ಆರಾಧಿಸು. ಪಾಪಕಳೆದುಕೊ ? ಶುಕ್ರಾಚಾರ್ಯರ ಆದೇಶ ಕೇಳಿ ಚಂದ್ರ ಪೆಚ್ಚಾದ. ಪ್ರಾಯಶ್ಚಿತ್ತ ಮಾಡಿಕೊಂಡ.

' ಅಮ್ಮಾ ಪತಿವ್ರತೆ ತಾರೆ ! ಈ ಚಂದ್ರನ ಮೋಹಕ ಸೌಂದರ್ಯಕ್ಕೆ ಮೋಹಿತಳಾಗದೆ, ಮನಸಾರೆ ಅವನ ಅಂಗಸಂಗವನ್ನು ಬಯಸದ ನೀನು ಸ್ವಯಂ ಪಾತಿವ್ರತ್ಯದಿಂದಲೆ ಪವಿತ್ರಳಾಗಿರುವಿ. ಪ್ರಾಯಶ್ಚಿತ್ತ ಬೇಕಿಲ್ಲ. ಧರ್ಮವನ್ನು ಬಲ್ಲ ಭಾರ್ಗವರ ಉದಾರ ಹೃದಯದ ಈ ಮಾತು ಆಕೆಯ ನೆನಗುದಿಯನ್ನು ತಣಿಸಿತು. ತಾರೆಯನ್ನು ಕೆಣಕಿದ ಚಂದ್ರನಿಗೆ ಶುಕ್ರಾಚಾರ್ಯರಿಂದ ಅಭಯಪ್ರದಾನದ ಜೊತೆಗೆ ಶಶರೂಪದ ಕಲಂಕ ಉಳ್ಳವನಾಗೆಂದು ಶಾಪವೂ-ಬಂತು.

ಅಭಯ ದಾನ ಮಾಡಿದ ಶುಕ್ರಾಚಾರ್ಯರು ತಾರಾಧರ್ಷಣದಿಂದ ಚಂದ್ರನಿಗೆ ಬಂದ ಪಾಪವನ್ನು ಅನೇಕರಿಗೆ ಹಂಚಿದರು. ಅವರು ಮಾಡಿದ ಶಪಥ, ಪಾಪ ಹಂಚಿದ ರೀತಿ ಈ ತೆರನಾಗಿದೆ–

'' ನಾನು ಮಾಡಿದ ತಪಸ್ಸು,ಹರಿಪೂಜೆ, ವ್ರತ, ತೀರ್ಥಸ್ನಾನ, ದಾನ, ಉಪವಾಸ ಇವುಗಳೆಲ್ಲ ಸಾರ್ಥಕವಾಗಿದ್ದಲ್ಲಿ ಅವುಗಳ ಫಲದಿಂದ ಚಂದ್ರ, ಪಾಪ ಮುಕ್ತನಾಗಲಿ.''

ಯಾರು ತ್ರಿಕಾಲ ಸಂಧ್ಯಾವಂದನ ಮಾಡುವುದಿಲ್ಲ. ನಿತ್ಯದಲ್ಲಿ ಭಗವಂತನ ಪೂಜೆ ಮಾಡುವುದಿಲ್ಲ. ತನ್ನ ಹೆಂಡತಿಗೆ ಮೋಸಮಾಡುವ ಗಂಡು, ಪರಸ್ತ್ರೀಸಂಗದ ಗಂಡು, ಗಂಡನನ್ನು ವಂಚಿಸಿ ಪರಪುರುಷನೆಡೆಗೆ ಧಾವಿಸುವ ಹೆಣ್ಣು, ನಿಷ್ಠುರವಾದ ಮಾತುಗಳಿಂದ ಪತಿಯೊಡನೆ ಜಗಳವಾಡುವ ಹೆಣ್ಣು, ಭಗವಂತನಿಗೆ ನೈವೇದ್ಯಮಾಡದ ಪದಾರ್ಥಗಳನ್ನು ಸೇವಿಸುವವರು. ಏಕಾದಶೀ, ಕೃಷ್ಣಾಷ್ಟಮಿ ದಿನಗಳಲ್ಲಿ ಉಪವಾಸಮಾಡದಿರುವವರು. ಕಳ್ಳತನ ಮಾಡುವ ಬ್ರಾಹ್ಮಣ, ಪರಸ್ತ್ರೀಯ ಮುಖ, ಸ್ತನ, ನಾಭಿ ಮುಂತಾದ ಗುಹ್ಯಪ್ರದೇಶಗಳನ್ನು ನೋಡುವವನು. ವೇಶ್ಯೆಯರು, ವಿಧವೆಯರು, ಋತುಸ್ನಾತರು ಮಾಡಿದ ಅನ್ನ ತಿನ್ನುವವರು, ತಾಯಿ, ತಂದೆ ಸತಿಯರನ್ನು ಪೋಷಣೆ ಮಾಡದವರು ಇವರೆಲ್ಲ ಚಂದ್ರನ ಪಾಪವನ್ನು ಹೊಂದಿ ಅನೇಕ ಉಗ್ರ ನರಕಗಳಿಗೆ ಸಾವಿರಾರು ವರ್ಷಗಳ ಕಾಲ ಬೀಳುವರು.

" ಯಾರು ಭಗವಂತನನ್ನು ಮತ್ತು ವೈಷ್ಣವರನ್ನು ದ್ವೇಷಿಸುತ್ತಾರೆ, ಅವರು ಚಂದ್ರನ ತಾರಾಧರ್ಷಣಪಾಪವನ್ನು ಹೊಂದಿ ಅದರ ಪರಿಣಾಮವಾಗಿ ಹದಿನಾಲ್ಕು ಇಂದ್ರರು ಆಳುವ ಕಾಲ ಸುಡುಭೂಮಿಯಲ್ಲಿ ಹೊರಳಾಡಿ ದಗ್ಧ ದೇಹಿಗಳಾಗಿ ದುಃಖ ಅನುಭವಿಸುತ್ತಾರೆ. ಆ ಬಳಿಕ ಜನ್ಮ ಚಂಡಾಲನಾಗಿ, ಐದು ಜನ್ಮ ಎತ್ತಾಗಿ, ನೂರು ಜನುಮ ಕತ್ತೆಯಾಗಿ, ಏಳು ಜನುಮ ಹಂದಿಯಾಗಿ, ಏಳು ಜನುಮ ಕಾಗೆಯಾಗಿ, ಐದು ಜನ್ಮ ಮಲದ ಕೃಮಿಯಾಗಿ, ನೂರು ಜನ್ಮ ಜಿಗಣೆಯಾಗಿ ಆಮೇಲೆ ಶುದ್ಧಿಯಾಗುತ್ತಾನೆ." ವಿಷ್ಣು ವೈಷ್ಣವ ದ್ವೇಷದ ಪರಿಣಾಮ ಎಷ್ಟುಘೋರ! ಆದರೆ ಇಂದು ನಾವು ಮಾಧ್ವರೆನಿಸಿಕೊಂಡು ಕ್ಷುದ್ರ ಸಂಕುಚಿತ ಭಾವನೆಗೊಳಗಾಗಿ ವೈಷ್ಣವ ದ್ವೇಷವನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಮಾಡುತ್ತ ಭಾರೀ ಸಾಧನೆ ಮಾಡಿದವರಂತೆ ಬೀಗುತ್ತ, ಶಾಪಾನುಗ್ರಹಶಕ್ತರೆಂಬಂತೆ ಭಾವಿಸಿಕೊಂಡು ಆತ್ಮ ವಂಚನೆ ಪರವಂಚನೆ ಮಾಡುತ್ತ ಕಾಲ ಕಳೆಯುತ್ತಿದ್ದೇವೆ.

ಹೀಗೆ ಶುಕ್ರಾಚಾರ್ಯರು ಚಂದ್ರನ ಪಾಪವನ್ನು ಹರಿದು ಹಂಚಿ ಅವನನ್ನು ಮುಕ್ತಗೊಳಿಸಿದರು.

ಅತ್ತ ಬೃಹಸ್ಪತ್ಯಾಚಾರ್ಯರು ಪತ್ನೀವಿಯೋಗದಿಂದ ದುಃಖತಪ್ತರಾಗಿ ಇಂದ್ರನಲ್ಲಿ

ವಿಷಯ ತಿಳಿಸಿದರು. ಸಾವಿರಾರು ದೂತರ ಮೂಲಕ ಇಂದ್ರ ಅನ್ವೇಷಣೆ ಮಾಡಿಸಿದಾಗ ಚಂದ್ರ ಭಾರ್ಗವರಲ್ಲಿ ಶರಣಾಗಿರುವ ವಿಚಾರ ತಿಳಿದು ಬಂತು. ವಿಷಯ ತಿಳಿದ ಇಂದ್ರ, ಬೃಹಸ್ಪತ್ಯಾಚಾರ್ಯರನ್ನು ಬ್ರಹ್ಮಲೋಕಕ್ಕೆ ಹೋಗುವಂತೆ ಹೇಳಿದ.

ಇಂದ್ರ ಬೃಹಸ್ಪತಿಗಳು ಬ್ರಹ್ಮನೆಡೆಗೆ ಹೋದರೆ ಎಲ್ಲ ವೃತ್ತಾಂತವನ್ನು ಅರಿತ ಬ್ರಹ್ಮ ನಸುನಕ್ಕು ನುಡಿದ-- ಆ ಭಗವಂತ ಯಾರಿಗೂ ಸುಮ್ಮನೆ ದುಃಖ ನೀಡುವುದಿಲ್ಲ. ಈ ಬೃಹಸ್ಪತಿಗೆ ಉತಥ್ಯ, ಸಂವರ್ತ ಎಂದು ಇಬ್ಬರು ತಮ್ಮಂದಿರು. ಕಡೆಯವನಾದ ಸಂವರ್ತನಿಗೆ ಕನಿಷ್ಠನೆಂದು ಏನನ್ನೂ ನೀಡಲಿಲ್ಲ. ಸಂವರ್ತ ಇದರಿಂದ ವ್ಯಥೆಗೊಂಡು ಈ ಆಸ್ತಿ ಯಾರಿಗೆ ಬೇಕೆಂದು ಆಸ್ತಿಕನಾದ. ತಪಸ್ವಿ ಆದ. ಉತಥ್ಯನ ಮಡದಿಯನ್ನು ಈ ಬೃಹಸ್ಪತಿ ಅಪಹರಿಸಿದ. ಪತ್ನೀ ವಿಯೋಗದಿಂದ ಉತಥ್ಯ ಬಹಳ ನೊಂದುಕೊಂಡ. ಅದರ ಪರಿಣಾಮ ಈಗ ಬೃಹಸ್ಪತಿಗೆ ತಾರಾ ವಿಯೋಗ. ಆಗಲಿ. ತಾರೆಯು ದೊರಕುವ ಏರ್ಪಾಟು ಮಾಡೋಣ ಎಂದರು. ರುದ್ರನೊಂದಿಗೆ ಸಮಾಲೋಚಿಸಿದಾಗ ಶುಕ್ರಾಚಾರ್ಯರು, ಚಂದ್ರ, ತಾರೆಯರನ್ನು ಬಿಟ್ಟು ಕೊಟ್ಟರೆ ಸರಿ.ಇಲ್ಲದಿದ್ದರೆ ಯುದ್ಧವೇ ಮಾರ್ಗ ಎಂದು ತೀರ್ಮಾನವಾಯಿತು.

ಶುಕ್ರಾಚಾರ್ಯರು ಸುಮ್ಮನೆ ಬಿಟ್ಟುಕೊಡಲು ಒಪ್ಪದಿದ್ದಾಗ ಘೋರ ಯುದ್ಧವಾಗಿ ದೈತ್ಯರು ಪರಾಜಿತರಾಗಿ ತಾರೆಯನ್ನು ಒಪ್ಪಿಸಿದರು.

ಆಗ ತಾರೆ ಗರ್ಭಿಣಿ. ಬ್ರಹ್ಮದೇವರು ಕೇಳಿದಾಗ ಚಂದ್ರನಿಂದ ಉಂಟಾದ ಗರ್ಭ ಎಂದು ಉಸುರಿದಳು. ಬ್ರಹ್ಮದೇವರು ತಾರೆಯನ್ನು ಕ್ಷಮಿಸುತ್ತ ನುಡಿದರು- ತಾರೆ! ನೀನು ಚಂದ್ರನಿಂದ ಬಲಾತ್ಕೃತಳಾದರೂ ಮನಸಾರೆ ಅವನನ್ನು ಬಯಸಲಿಲ್ಲ. ಆದುದರಿಂದ ನಿನ್ನ ಪಾತಿವ್ರತ್ಯಕ್ಕೆ ಧಕ್ಕೆ ಇಲ್ಲ. ಧೈರ್ಯವಾಗಿ ಬೃಹಸ್ಪತಿಯೊಡನೆ ಸಂಸಾರ ಹೂಡು.

ಯಾರು ಸಕಾಮರಾಗಿ ಜಾರನೊಂದಿಗೆ ಬೆರೆಯುತ್ತಾರೆ, ಅವರು ಕುಂಭೀಪಾಕಕ್ಕೆ ಹೋಗುತ್ತಾರೆ. ನೀನು ಅಂಥವಳಲ್ಲ ಎಂದರು. ತಾರೆಯಲ್ಲಿ ಚಂದ್ರನಿಂದ ಹುಟ್ಟಿದ ಬುಧ ಚಂದ್ರನೊಂದಿಗೆ ಹೋದ. ತಾರೆ ಬೃಹಸ್ಪತಿಯೊಂದಿಗೆ ಸೇರಿದಳು.

'ಬ್ರಹ್ಮವೈವರ್ತ' ಪುರಾಣದಲ್ಲಿ ಬರುವ ಈ ಸಂಧರ್ಭ ಧರ್ಮಶಾಸ್ತ್ರದ ಹೃದಯವೈಶಾಲ್ಯವನ್ನು ಬಿಂಬಿಸುತ್ತದೆ. ಚಂದ್ರನ ಸಂಪರ್ಕ ಪಡೆದ ತಾರೆ "ಅಹಲ್ಯಾ, ದ್ರೌಪದೀ, ಸೀತಾ, ತಾರಾ" ಎಂದು ಮಹಾಪತಿವ್ರತೆಯರ ಸಾಲಿನಲ್ಲಿ ಹೇಗೆ ಸೇರುವಳೆಂದು ಪ್ರಶ್ನಿಸುವವರಿಗೆ ಈ ಪುರಾಣ ಕಣ್ತೆರೆಸುತ್ತದೆ.

